# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ



೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

## "ದೇಜಗೌರವರ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಸಾಹಿತ್ಯ : ಒಂದು ಅಧ್ಯಯನ"


*ಮಾರ್ಗದರ್ಶಕರು*

**ಡಾ. ಮಳಲಿ ವಸಂತಕುಮಾರ್**

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು.

*ನಿಬಂಧಕಾರರು*

**ನಾಗೇಂದ್ರ ಕೆ.ಎಂ.**

ಎಂ.ಫಿಲ್ ವಿದ್ಯಾರ್ಥಿ


**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮಿಪುರಂ**

**ಮೈಸೂರು.**



೨೦೦೬-೦೭

# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ



೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# "ದೇಜಗೌರವರ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಸಾಹಿತ್ಯ : ಒಂದು ಅಧ್ಯಯನ"

*ಮಾರ್ಗದರ್ಶಕರು*

**ಡಾ. ಮಳಲಿ ವಸಂತಕುಮಾರ್**

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು.

*ನಿಬಂಧಕಾರರು*

**ನಾಗೇಂದ್ರ ಕೆ.ಎಂ.**

ಎಂ.ಫಿಲ್ ವಿದ್ಯಾರ್ಥಿ

**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮಿಪುರಂ**

**ಮೈಸೂರು.**

೨೦೦೬-೦೭



# ದೃಢೀಕರಣ ಪತ್ರ

೨೦೦೬-೦೭ನೇ ಸಾಲಿನ ಕ್ರಮ ಸಂಖ್ಯೆ –೧೮ರ **ನಾಗೇಂದ್ರ ಕೆ.ಎಂ.** ಎಂ.ಫಿಲ್. ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ **"ದೇಜಗೌರವರ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಸಾಹಿತ್ಯ : ಒಂದು ಅಧ್ಯಯನ"** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ಸಹಿ

**ಡಾ. ಮಳಲಿ ವಸಂತಕುಮಾರ್**

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು.

ಸ್ಥಳ : ಮೈಸೂರು

ದಿನಾಂಕ :೩೧/೦೮/೨೦೦೭



# ಪ್ರಮಾಣ ಪತ್ರ

**"ದೇಜಗೌರವರ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಸಾಹಿತ್ಯ : ಒಂದು ಅಧ್ಯಯನ"** ಎಂಬ ವಿಷಯದ ಸಂಶೋಧನ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ೧೬೭ರ ವಿದ್ಯಾರ್ಥಿಯಾದ ನಾನು ೨೦೦೬–೦೭ನೇ ಸಾಲಿನ ಪರೀಕ್ಷೆಗಾಗಿ ನಿವೃತ್ತ ಪ್ರಾಧ್ಯಾಪಕರು, **ಡಾ. ಮಳಲಿ ವಸಂತಕುಮಾರ್** (ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು) ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲ ಎಂದು ಪ್ರಮಾಣೀಕರಿಸಿರುತ್ತೇನೆ.

ಸ್ಥಳ : ಮೈಸೂರು
ದಿನಾಂಕ : /೦ /೨೦೦೭

ಸಹಿ

**ನಾಗೇಂದ್ರ ಕೆ.ಎಂ.**
೨೦೦೬–೦೭ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ
ಮೈಸೂರು.

# ಕೃತಜ್ಞತೆಗಳು

**"ದೇಜಗೌರವರ ವಿಸ್ಮಯಗಳ ನಾಡಿನಲ್ಲಿ ಪ್ರವಾಸ ಸಾಹಿತ್ಯ : ಒಂದು ಅಧ್ಯಯನ"** ಎಂಬ ಈ ನಿಬಂಧವನ್ನು ರಚಿಸಲು ನನಗೆ ಸೂಕ್ತ ಮಾರ್ಗದರ್ಶನ ಹಾಗೂ ಸಲಹೆಗಳನ್ನು ನೀಡಿದ ಪೂಜ್ಯ ಗುರುಗಳಾದ **ಡಾ. ಮಳಲಿ ವಸಂತಕುಮಾರ್** ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅಧ್ಯಯನದ ಸಂದರ್ಭದಲ್ಲಿ ಮಾರ್ಗದರ್ಶನ ಮತ್ತು ಸಹಾಯ ಮಾಡಿದ ನನ್ನ ತಾಯಿಯವರಾದ ಶ್ರೀಮತಿ ರತ್ನಮ್ಮ ಅವರಿಗೆ ನಾನು ಋಣಿಯಾಗಿದ್ದೇನೆ.

ಅಧ್ಯಯನದ ಮಾಹಿತಿ ಸಂಗ್ರಹ ಹಾಗೂ ನನ್ನ ಬರವಣಿಗೆಯ ಹಂತದಲ್ಲಿ ಸಹಕರಿಸಿದ ಪ್ರೀತಿ ಎಂ.ಎನ್. ಹಾಗೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ನನ್ನ ಎಲ್ಲಾ ಸ್ನೇಹಿತರಿಗೂ ಮತ್ತು ಸಕಾಲಕ್ಕೆ ನಮಗೆ ಈ ಸಂಪ್ರಬಂಧವನ್ನು ಮುದ್ರಿಸಿಕೊಟ್ಟ 'ಎ' ಪಾಯಿಂಟ್ ಡಿ.ಟಿ.ಪಿ. ಸೆಂಟರ್, ಬೋಗಾದಿ ಅವರಿಗೂ ಸಹ ಕೃತಜ್ಞನಾಗಿರುತ್ತೇನೆ.

ಸ್ಥಳ : ಮೈಸೂರು
ದಿನಾಂಕ : /೦ /೨೦೦೭

ನಿಬಂಧಕಾರರು

ನಾಗೇಂದ್ರ .ಕೆ.ಎಂ.

# ಪರಿವಿಡಿ

# ಅಧ್ಯಾಯ – ೧

## ಪ್ರವಾಸ ಕಥನ ಎಂದರೇನು? ಅದರ ಸ್ವರೂಪ ಮತ್ತು ಲಕ್ಷಣಗಳು

ಪ್ರವಾಸವನ್ನು ಇಂಗ್ಲೀಷ್‌ನಲ್ಲಿ 'Tourist' ಎಂಬ ಪದದಿಂದ ಕರೆಯಲಾಗುತ್ತದೆ. Tourist ಎಂಬ ಮೂಲ ಪದ ಕ್ರಿ.ಶ. ೧೨೯೨ರಷ್ಟು ಹಳೆಯದು. ಅದು 'Tour' ಎಂಬ ಪದದಿಂದ ಬಂದಿದೆ. 'Tour' ಎಂಬ ಪದವು ಲ್ಯಾಟೀನ್ ಭಾಷೆಯ 'Tourns' ಎಂಬುವುದರಿಂದ ಬಂದಿದೆ. ಇದರ ಅರ್ಥ 'ವೃತ್ತವೊಂದನ್ನು ವಿವರಿಸುವ ಸಾಮಗ್ರಿ' ಅಥವಾ 'ಸುತ್ತುವವನ ಚಕ್ರ' ಎಂದು. ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಈ ಪದವು ಮೊದಲಿಗೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸುವುದು. ಒಂದು ಸಂಚಾರ, ಒಂದು ವಿಹಾರಯಾತ್ರೆ, ಒಂದು ದೇಶ ಅಥವಾ ಪ್ರಾಂತ್ಯದ ಪ್ರಮುಖ ಭಾಗಗಳನ್ನು ಮುಟ್ಟುವ ಒಂದು ಬಳಸಾದ (Circuitions) ಪ್ರವಾಸ ಎಂದು ಬಳಸಲಾಯಿತು. (19th Century Dictionary) ಯಲ್ಲಿ 'Tourist' ಪದಕ್ಕೆ "ಕುತೂಹಲದಿಂದ ಪ್ರೇರಿತನಾದ ವ್ಯಕ್ತಿಯೋರ್ವನು ತನಗೆ ಮಾಡಲು ಬೇರೆ ಯಾವುದೂ ಕೆಲಸವಿಲ್ಲದಿದ್ದರಿಂದ ಸುತ್ತಾಟದಿಂದ ಖುಷಿ ಹೊಂದಲು ಪ್ರವಾಸ ಕೈಗೊಂಡವನು" ಎಂಬ ಅರ್ಥ ನೀಡಿದೆ. 'Oxford Dictionary' ಯು 'Tourist' ಪದವು ಕ್ರಿ.ಶ. ೧೮೦೦ಕ್ಕಿಂತ ಹಿಂದೆಯೇ ಬಳಸಲ್ಪಟ್ಟಿದೆಯೆಂದು ಹೇಳುತ್ತದೆ. 'Dictionnaire Universal' ಕೃತಿಯಲ್ಲಿ 'Tourist' ಪದವು "ವ್ಯಕ್ತಿಯೋರ್ವನು ಕುತೂಹಲಕ್ಕಾಗಿ ಸಂಚಾರದಿಂದ ಪಡೆಯಬಹುದಾದ ಖುಷಿಗಾಗಿ ಅಥವಾ ತಾನು ಸುತ್ತಾಡಿದುದನ್ನು ಬೇರೆಯವರಿಗೆ ಹೇಳಲಿಕ್ಕಾಗಿ ಮಾಡಿದ ಸಂಚಾರ"[೧] ಎಂದು ವಿವರಿಸಲಾಗಿದೆ.

ನಮ್ಮಲ್ಲಿ ಒಂದು ಗಾದೆ ಮಾತಿದೆ, "ದೇಶ ಸುತ್ತಬೇಕು; ಕೋಶ ಓದಬೇಕು" ಎಂದು ಮಾನವ ತನ್ನ ಅನುಭವಗಳನ್ನು ವಿಸ್ತರಿಸಿಕೊಳ್ಳಲು ಮೊದಲಿಗೆ ಅವನಿಗೆ ಲೋಕಜ್ಞಾನ ಅವಶ್ಯಕವಾಗಬೇಕು. ಅದಕ್ಕಾಗಿ ದೇಶವನ್ನು ಸುತ್ತಿದಾಗ ಅಲ್ಲಿ ಕಂಡುಬರುವ ವಿವಿಧ ಬಗೆಯ ಜನರು, ಅವರ ವೇಷ ಭೂಷಣಗಳು, ಆಚಾರ–ವಿಚಾರಗಳು, ಸಂಪ್ರದಾಯಗಳು, ಹಾಡು–ಹಬ್ಬಗಳ ಪರಿಚಯವಾಗುತ್ತದೆ. ಇದರಿಂದ ಅವನ ಜ್ಞಾನದಿಗಂತ ವಿಸ್ತಾರಗೊಳ್ಳಲು

---

[೧] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಪ್ರವಾಸ ಸಾಹಿತ್ಯ ಪು. ೩೧.

ಸಹಾಯಕವಾಗುತ್ತದೆ. ಹಾಗೆಯೇ 'ಕೋಶ ಓದು' ಎಂಬ ಮಾತು ಅನೇಕ ವಿಚಾರಗಳನ್ನು ಓದಿನ ಮೂಲಕ ಅರಿತುಕೊಳ್ಳಬಹುದು ಎಂಬುದನ್ನು ಧ್ವನಿಸುತ್ತದೆ.

ಪ್ರಾಚೀನ ಕಾಲದಿಂದಲೂ ಮಾನವನಿಗೆ ಸಂಚಾರವನ್ನು ಕೈಗೊಳ್ಳುವುದು ಒಂದು ಸಂತೋಷದ ವಿಚಾರವಾಗಿದ್ದಿತು. ಪರಿಸರ ಬದಲಾವಣೆ ಅವನಿಗೆ ನೂತನ ಅನುಭವಗಳನ್ನು ತಂದುಕೊಡುತ್ತಿದ್ದವು. ಇದರಿಂದ ಅವನಿಗೆ ನವಚೈತನ್ಯವುಂಟಾಗಿ, ಹೊಸ ವಿಚಾರಗಳನ್ನು ಅರಿತುಕೊಳ್ಳತೊಡಗಿದನು. ಹಾಗೆಯೇ ಹೊಸ ಹೊಸ ಪ್ರದೇಶಗಳನ್ನು ಕಂಡುಹಿಡಿಯುವುದು ಅವನ ಸಾಹಸ ಪ್ರವೃತ್ತಿಯ ವಿಷಯವಾಗಿದ್ದಿತು.

ಹೀಗೆ ವ್ಯಕ್ತಿ ತನ್ನ ಸಂತೋಷಕ್ಕಾಗಿ ಮಾಡಿದ ಸಂಚಾರವನ್ನು 'ಪ್ರವಾಸ' ಎಂದು ಕರೆಯಲಾಗುತ್ತದೆ. ಮನುಷ್ಯ ತನ್ನ ದಿನ ನಿತ್ಯದ ಜಂಜಾಟದಿಂದ ಮನಸ್ಸಿಗೆ ನೆಮ್ಮದಿಯನ್ನು ಪಡೆಯಲಿಕ್ಕಾಗಿ ಹೊಸ ಪ್ರದೇಶಗಳಿಗೆ ಭೇಟಿಯನ್ನು ನೀಡುತ್ತಾನೆ. ಅಲ್ಲಿನ ನಿಸರ್ಗದ ಚೆಲುವು, ರಮ್ಯತೆ, ಅಲ್ಲಿನ ಜನರೊಂದಿಗೆ ಒಡನಾಟಗಳಿಂದ ಅವನಿಗೆ ಹೊಸ ಲೋಕಾನುಭವವಾಗುತ್ತದೆ. ಹೀಗೆ ಪಡೆದುಕೊಂಡ ಅನುಭವ, ಜ್ಞಾನ ಅವನ ಬದುಕಿನ ಮುಂದಿನ ದಿನಗಳಿಗೆ ಒಂದು ಹೊಸತನವನ್ನುಂಟು ಮಾಡುತ್ತದೆ.

'ಖುಷಿ ಸಂಚಾರ' ಎಂಬ ಅರ್ಥದಲ್ಲಿ 'Tourist' ಪದ ಬಳಕೆಗೊಂಡದ್ದು ತೀರಾ ಇತ್ತೀಚೆಗೆ. ೧೯ನೇ ಶತಮಾನದ ಮೊದಲಿಗೆ 'Tourist' ಪದವು ಪ್ರವಾಸ ಅಥವಾ ಪ್ರವಾಸಗಳನ್ನು ಮಾಡುವವನು, ಮೇಲಾಗಿ "ಇದನ್ನು ಮನರಂಜನೆಗಾಗಿ ಮಾಡುವವನು ಅಥವಾ ಆನಂದಕ್ಕಾಗಿ, ಕುತೂಹಲಕ್ಕಾಗಿ, ಪ್ರಕೃತಿಯ ಸುಂದರ ದೃಶ್ಯಗಳಿಗಾಗಿ ಸಂಚರಿಸುವವನು"[೨] ಎಂಬ ಅರ್ಥದಲ್ಲಿ ಬಳಕೆಗೊಂಡಿತು. ಮನುಷ್ಯ ಪ್ರವಾಸ ಕೈಗೊಳ್ಳುವುದು ತನ್ನ ಮನಸ್ಸಂತೋಷಕ್ಕಾಗಿ ಮತ್ತು ಹೊಸ ಜಾಗದ ಪ್ರಕೃತಿಯ ಸುಂದರ ರಮಣೀಯ ದೃಶ್ಯಗಳನ್ನು ನೋಡುವುದಕ್ಕಾಗಿ ಮತ್ತು ಪ್ರಾಚೀನ ದೂರ ದೇಶಗಳ, ಸ್ಥಳಗಳ ಬಗೆಗೆ ಹೆಚ್ಚಿನ ತಿಳುವಳಿಕೆ ಪಡೆಯುವ ತೀವ್ರತರವಾದ ಹಂಬಲದಿಂದ, ಅಲ್ಲಿನ ವಿಶೇಷ ವಸ್ತುಗಳನ್ನು ನೋಡುವುದಕ್ಕಾಗಿ ಅವನು ಸಂಚಾರ ಕೈಗೊಳ್ಳುತ್ತಾನೆ.

೧೯೭೩ರಲ್ಲಿ ಲೀಗ್ ಆಫ್ ನೇಷನ್ಸ್ 'Tourist' ಪದದ ವ್ಯಾಖ್ಯೆಯನ್ನು ಸ್ಪಷ್ಟಪಡಿಸಿತು. ಅದು ವಿದೇಶ ಪ್ರವಾಸ (Foreign Tourist) ಪದವನ್ನು ವಿವರಿಸುತ್ತಾ "ಯಾವಾತನು ತಾನು

---

[೨] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಪ್ರವಾಸ ಸಾಹಿತ್ಯ ಪು. ೩೧.

ಸಾಮಾನ್ಯವಾಗಿ ವಾಸ ಮಾಡುವ ದೇಶದ ಹೊರಗೆ ಕೊನೆಯ ಪಕ್ಷ ೨೪ ಗಂಟೆಗಳ ಅವಧಿಯಲ್ಲಿ ಬೇರೆ ದೇಶಕ್ಕೆ ಭೇಟಿ ನೀಡುವವನು"[೩] ಎಂದಿದೆ. ಈ ವ್ಯಾಖ್ಯಾನದ ಪ್ರಕಾರ ಒಬ್ಬ ವ್ಯಕ್ತಿ ತನ್ನ ಖುಷಿಗಾಗಿ, ವ್ಯಾಪಾರೋದ್ದೇಶಕ್ಕಾಗಿ ಸಂಚರಿಸುವುದು ಪ್ರವಾಸ ಎನ್ನಿಸಿಕೊಳ್ಳುತ್ತದೆ.

೧೯೬೩ರಲ್ಲಿ ರೋಮ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಪ್ರವಾಸ ಹಾಗೂ ಪ್ರವಾಸೋದ್ಯಮದ ಮೇಲೆ ಸಂಯುಕ್ತ ಸಂಸ್ಥಾನಗಳ ಸಮಾವೇಶ 'Tourist' ಪದಕ್ಕೆ ವ್ಯಾಖ್ಯಾನವೊಂದನ್ನು ಸಿದ್ಧಪಡಿಸಿ ಇದನ್ನು ಸಂಯುಕ್ತ ಸಂಸ್ಥಾನಗಳ ಅಂಕಿ-ಅಂಶಗಳ ಸಂಗ್ರಹಣ ಆಯೋಗವು ಅಧ್ಯಯನ ಮಾಡಬೇಕೆಂದು ಶಿಫಾರಸ್ಸು ಮಾಡಿತು. ಅಲ್ಲಿ ಪುನರ್ವಿಮರ್ಶಿತ ವ್ಯಾಖ್ಯೆಯೊಂದನ್ನು ಸಿದ್ಧಪಡಿಸಿ ಅದನ್ನು ಸ್ವೀಕರಿಸಲಾಯಿತು. ಸಭೆಯು 'Visitor' ಎಂಬ ಪದದ ಎಲ್ಲಾ ರೀತಿಯ ವ್ಯಾಖ್ಯಾನವನ್ನು ವಿಚಾರ ಮಾಡಿತು. ಅದು ಅಂಕಿ-ಅಂಶಗಳ ಸಂಗ್ರಹಣ ಉದ್ದೇಶನಗಳಿಗಾಗಿ ಹೀಗೆ ವಿವರಣೆ ನೀಡುತ್ತದೆ.

"ಯಾವುದೇ ವ್ಯಕ್ತಿಯು ತಾನು ಸಾಮಾನ್ಯವಾಗಿ ವಾಸವಿರುವ ಸ್ಥಳದಿಂದ ಹೊರಗೆ; ತಾನು ಭೇಟಿ ಕೊಟ್ಟ ದೇಶದ ಒಳಗೆ, ಆದಾಯ ತರುವ ವೃತ್ತಿಯೊಂದನ್ನು ಅನುಸರಿಸಿ ದೇಶವೊಂದಕ್ಕೆ ಭೇಟಿ ನೀಡುವುದು."

ಈ ವ್ಯಾಖ್ಯೆಯು ಕೆಳಗಿನ ವಿವರಗಳನ್ನು ಒಳಗೊಳ್ಳುತ್ತದೆ. ಪ್ರವಾಸಿಗರು (Toursit) ಇತ್ಯಾದಿ, ಭೇಟಿ ನೀಡಿದ ದೇಶದಲ್ಲಿ ಕನಿಷ್ಠ ಪಕ್ಷ ೨೪ ಗಂಟೆಗಳವರೆವಿಗೆ ವಾಸ್ತವ್ಯ ಹೂಡುವ ತಾತ್ಕಾಲಿಕ ಸಂದರ್ಶಕರು ಅವರ ಪ್ರಯಾಣದ ಉದ್ದೇಶವನ್ನು ಈ ಕೆಳಗಣ ಶೀರ್ಷಿಕೆಗಳಲ್ಲಿ ಯಾವುದಾದರೂ ಒಂದರ ಕೆಳಗೆ ವಿಂಗಡಿಸಬಹುದು.

i. ಅ. ವಿರಾಮ (ಮನರಂಜನೆ, ರಜೆ, ಆರೋಗ್ಯ, ಅಧ್ಯಯನ, ಧಾರ್ಮಿಕ ಹಾಗೂ ಕ್ರೀಡೆ)

   ಆ. ವ್ಯಾಪಾರ, ಕುಟುಂಬ, ಆಯೋಗ, ಸಭೆ.

ii. ವಿಹಾರ ಪ್ರಯಾಣಿಕರು (Excursionists) ಇತ್ಯಾದಿ ಭೇಟಿ ನೀಡಿದ ದೇಶದೊಳಗೆ ೨೪ ಗಂಟೆಗಳಿಗಿಂತ ಕಡಿಮೆ ವಾಸ್ತವ್ಯ ಹೂಡುವ ತಾತ್ಕಾಲಿಕ ಸಂದರ್ಶಕರು (ಸಮುದ್ರ ವಿಕೋಪಕ್ಕೆ ಒಳಗಾದ ಪ್ರವಾಸಿಗರನ್ನು ಒಳಗೊಂಡು)

---

[೩] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಪು. ೩೧.

ಈ ಎಲ್ಲಾ ವ್ಯಾಖ್ಯೆಗಳು ಕ್ರಮವಾಗಿ ಸಾರ್ವತ್ರಿಕ ಒಪ್ಪಿಗೆಯನ್ನು ಪಡೆಯುತ್ತಿವೆ. ವಿಶ್ವ ಪ್ರವಾಸೋದ್ಯಮ ಸಂಸ್ಥೆಯು (WTO) ಈ ವ್ಯಾಖ್ಯೆಯನ್ನು ಅಭಿವೃದ್ಧಿಪಡಿಸಿದ್ದು, ಸುಮಾರು ೧೧೦ ಸದಸ್ಯ ರಾಷ್ಟ್ರಗಳು ಇದನ್ನು ಅಂಗೀಕರಿಸಿವೆ. ಈ ವ್ಯಾಖ್ಯೆಯನ್ನು ಅಂಗೀಕರಿಸಿದ ರಾಷ್ಟ್ರಗಳಲ್ಲಿ ಭಾರತ ಸಹ ಸೇರಿದೆ.[೪]

ಹೀಗೆ Tourist' ಅಥವಾ ಪ್ರವಾಸ ಎಂಬ ಪದಕ್ಕೆ ಸುಧೀರ್ಘವಾದ ವಿವರಣೆಯನ್ನು ಕಾಣಬಹುದಾಗಿದೆ.

ಈ ಪ್ರವಾಸಗಳಲ್ಲಿ ವ್ಯಕ್ತಿಯು ತನ್ನ ಸ್ಥಳೀಯ ಪ್ರದೇಶದ ಪ್ರವಾಸವನ್ನು ಕೈಗೊಳ್ಳಬಹುದು ಇಲ್ಲಾ ವಿದೇಶಿ ಪ್ರವಾಸವನ್ನು ಕೈಗೊಳ್ಳಬಹುದಾಗಿದೆ. ದೇಶೀಯ ಪ್ರವಾಸದಲ್ಲಿ ತಮ್ಮ ವಾಸ ಸ್ಥಾನದಿಂದ ನಿರ್ಧಿಷ್ಟ ಪ್ರದೇಶಕ್ಕೆ ಹೋಗಿ ಅಲ್ಲಿ ಒಂದು ದಿನ ತಂಗಿದ್ದು ಬರುವುದು. ಇದಕ್ಕೆ ಬೇರೆ ಯಾವ ನಿರ್ಭಂಧಗಳು ಇರುವುದಿಲ್ಲ. ವಿದೇಶಿ ಪ್ರವಾಸ ಕೈಗೊಳ್ಳಬೇಕಾದರೆ ಪ್ರವಾಸಿಗನು ಕಾನೂನು ಕಟ್ಟಲೆಗಳ ಪಾಲನೆಯನ್ನು ಮಾಡಬೇಕಾಗುತ್ತದೆ.

ಪ್ರವಾಸವನ್ನು ಜನರು ಏಕೆ ಮಾಡುತ್ತಾರೆ? ಎಲ್ಲರೂ ಏಕೆ ಮಾಡುವುದಿಲ್ಲ? ಎಂಬ ಅನೇಕ ಪ್ರಶ್ನೆಗಳು ಉದ್ಬವವಾಗುತ್ತವೆ. ಮನುಷ್ಯರು ಸಾಮಾನ್ಯವಾಗಿ ಒಂದಕ್ಕಿಂತ ಹೆಚ್ಚಿನ ಕಾರಣಗಳಿಗಾಗಿ ಪ್ರವಾಸ ಮಾಡುತ್ತಾರೆ. ಇನ್ನು ಕೆಲವರು ಬೇರೆ ಬೇರೆ ಉದ್ದೇಶಗಳಿಗಾಗಿ ಪ್ರವಾಸ ಕೈಗೊಳ್ಳುತ್ತಾರೆ. ಪ್ರವಾಸವನ್ನು ಏಕೆ ಕೈಗೊಳ್ಳುತ್ತಾರೆ ಎಂಬುದಕ್ಕೆ ಮ್ಯಾಕಿಂಟಾಸ್ ಹೇಳುವಂತೆ, ಪ್ರವಾಸದ ಮೂಲ ಪ್ರೇರಣೆಗಳನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು.

i. ಶಾರೀರಿಕ ಪ್ರೇರಣೆ – ಶಾರೀರಿಕ ವಿಶ್ರಾಂತಿ ಹಾಗೂ ವಿರಾಮ, ಕ್ರೀಡಾ ಚಟುವಟಿಕೆಗಳು, ನಿರ್ಧಿಷ್ಟ ವೈದ್ಯಕೀಯ ಚಿಕಿತ್ಸೆ ಇವುಗಳಿಗೆ ಸಂಬಂಧಿಸಿರುತ್ತದೆ. ವ್ಯಕ್ತಿಯೋರ್ವನ ದೈಹಿಕ ಆರೋಗ್ಯ ಹಾಗೂ ಒಳಿತಿಗೆ ಸಂಬಂಧಿಸಿರುತ್ತದೆ.

[೪] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಪ್ರವಾಸ ಸಾಹಿತ್ಯ ಪು. ೩೪.

ii. ಸಾಂಸ್ಕೃತಿಕ ಪ್ರೇರಣೆ – ಅನ್ಯದೇಶ ಹಾಗೂ ಅವುಗಳ ಜನರು, ಅವರ ಕಲೆ, ಸಂಗೀತ, ಸಾಹಿತ್ಯ, ಜಾನಪದ ಇತ್ಯಾದಿಗಳಲ್ಲಿ ಅಭಿವ್ಯಕ್ತಗೊಂಡಿರುವ ಸಾಂಸ್ಕೃತಿಕ ಪರಂಪರೆ ಇವನ್ನು ತಿಳಿಯಬೇಕೆಂಬ ವ್ಯಕ್ತಿಯೋರ್ವನ ಆಸೆಗೆ ಇದು ಸಂಬಂಧಿಸಿರುತ್ತದೆ.

iii. ವ್ಯಕ್ತಿಯ ಅಂತರ ಪ್ರೇರಣೆ – ಬಂಧು–ಮಿತ್ರರನ್ನು ಭೇಟಿ ಮಾಡುವುದು ಅಥವಾ ತನ್ನ ಕುಟುಂಬದಿಂದ, ಜೊತೆ ಕೆಲಸಗಾರರಿಂದ, ನೆರೆ ಹೊರೆಯವರಿಂದ ಬಿಡಿಸಿಕೊಂಡು ಹೋಗುವುದು ಇವುಗಳಿಗೆ ಸಂಬಂಧಿಸಿರುತ್ತದೆ.

iv. ಅಂತಸ್ತು ಹಾಗೂ ಪ್ರತಿಷ್ಠೆಯ ಪ್ರೇರಣೆ – ಇದು ವೈಯಕ್ತಿಕ ಗೌರವ ಹಾಗೂ ವೈಯಕ್ತಿಕ ಪ್ರಗತಿಯ ಅಗತ್ಯದ ಜೊತೆ ಗುರುತಿಸಲ್ಪಡುತ್ತದೆ. ಇವು ವ್ಯಾಪಾರಕ್ಕಾಗಿ ಪ್ರವಾಸ ಅಥವಾ ವೃತ್ತಿ ಸಂಬಂಧಗಳಿಗಾಗಿ, ಹವ್ಯಾಸಗಳನ್ನು ಮುಂದುವರೆಸಿಕೊಂಡು ಹೋಗಲು ಅಗತ್ಯ ವಿದ್ಯಾಭ್ಯಾಸವನ್ನು ಪಡೆಯುವುದಕ್ಕಾಗಿ ಸಂಬಂಧಿಸಿರುತ್ತದೆ.

ಮೇಲೆ ತಿಳಿಸಿದ ನಾಲ್ಕು ಪ್ರೇರಣೆಗಳನ್ನು ಪ್ರವಾಸಕ್ಕೆ ಮುಖ್ಯವಾದ ಪ್ರೇರಣೆಗಳೆಂದು ಮ್ಯಾಕಿಂಟಾಸ್ ತಿಳಿಸಿದ್ದಾರೆ.[೨೫]

ಈ ಪ್ರೇರಣೆಗಳನ್ನು ಗಮನಿಸಿದಾಗ ಮಾನವ ತನ್ನ ದೈನಂದಿನ ಬದುಕಿನ ಒತ್ತಡಗಳಿಂದ ಹೊರಬಂದು ಅವನಿಗೆ ಒಂದು ಉಲ್ಲಾಸಕರವಾದ ವಾತಾವರಣದಲ್ಲಿ ಕಾಲ ಕಳೆಯುವ ಹಂಬಲದಿಂದ ಅವನು ಪ್ರವಾಸವನ್ನು ಕೈಗೊಳ್ಳುತ್ತಾನೆ. ಅವನು ಹೆಚ್ಚಿನದಾಗಿ ಪ್ರವಾಸ ಕಾಲದಲ್ಲಿ ಸಂತೋಷ, ತಮಾಷೆ, ಮನರಂಜನೆಯನ್ನು ಪಡೆಯುವ ಉದ್ದೇಶವನ್ನು ಹೊಂದಿರುತ್ತಾನೆ. ಇವು

---

[೨೫] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ. ಪು. ೩೬–೩೭.

ಅವನ ಮನಸ್ಸಿಗೆ ಪ್ರವಾಸ ಕಾಲದಲ್ಲಿ ನೆಮ್ಮದಿಯನ್ನು ತಂದುಕೊಡಬಲ್ಲ ಸಂಗತಿಗಳಾಗಿರುತ್ತವೆ. ಹಾಗೆಯೇ ಇಂದಿನ ಯಾಂತ್ರಿಕ ಜೀವನ. ಕೆಲಸದ ಒತ್ತಡಗಳು ಅವನಿಗೆ ಹೆಚ್ಚಿನ ಹೊರೆಯನ್ನು ತರುತ್ತವೆ. ಇವುಗಳಿಂದ ಸ್ವಲ್ಪಕಾಲವಾದರೂ ಬಿಡುಗಡೆ ಹೊಂದಿ ಪ್ರಶಾಂತವಾದ ಪರಿಸರದಲ್ಲಿ ವಿಶ್ರಾಂತಿಯನ್ನು ಪಡೆದು ಮನಸ್ಸು ಮತ್ತು ಶರೀರದ ಒತ್ತಡಗಳ ನಿವಾರಣೆಗಾಗಿ ಅವನು ಸುಂದರ ಪ್ರಕೃತಿಯ ಪರಿಸರಕ್ಕೆ ಪ್ರವಾಸ ಕೈಗೊಳ್ಳುತ್ತಾನೆ. ವಾತಾವರಣದಿಂದ ಬದಲಾವಣೆಯನ್ನು ಬಯಸುತ್ತಾನೆ. ತಾನು ಕೈಗೊಂಡ ಪ್ರವಾಸದಲ್ಲಿ ಅವನಿಗುಂಟಾಗುವ ಅನುಭವಗಳು ಅವನಲ್ಲಿ ಏಕತಾನತೆಯನ್ನು ತೊಡೆದು ಹಾಕಿ, ಹೊಸ ಚೈತನ್ಯವನ್ನುಂಟು ಮಾಡುತ್ತದೆ. ಪ್ರವಾಸ ಬರೀ ಪ್ರೇಕ್ಷಣೀಯ ಸ್ಥಳಗಳನ್ನು ಸುತ್ತಿಬರುವುದಕ್ಕೆ ಮಾತ್ರ ಸೀಮಿತವಾಗಿಲ್ಲ. ಇದು ಆರೋಗ್ಯಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಒಳಗೊಂಡಿದೆ. ಉತ್ತಮವಾದ ಪರಿಸರದಲ್ಲಿ ಶುದ್ಧಗಾಳಿ, ಸುಂದರ ವಾತಾವರಣ ಅವನಿಗೆ ಹೊಸತನವನ್ನುಂಟು ಮಾಡುತ್ತದೆ. ಆರೋಗ್ಯದ ದೃಷ್ಟಿಯಿಂದ ಕೆಲವರು ಪ್ರವಾಸವನ್ನು ಕೈಗೊಳ್ಳುತ್ತಾರೆ. ಇನ್ನೂ ಕೆಲವರು ದೂರ ಸ್ಥಳಗಳಲ್ಲಿನ ಚಾರಿತ್ರಿಕ ಮಹತ್ವವುಳ್ಳ ಸ್ಥಳ ಹಾಗೂ ವಸ್ತು, ಕಟ್ಟಡಗಳನ್ನು ನೋಡಲು ಹೋಗುತ್ತಾರೆ. ಅಲ್ಲಿನ ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ, ಜಾನಪದ, ಚಿತ್ರಕಲೆ, ಕ್ರೀಡೆ ಹೀಗೆ ಅನೇಕ ವಿಷಯಗಳನ್ನು ಕುತೂಹಲದಿಂದ ಅರಿತುಕೊಳ್ಳಲು ಪ್ರವಾಸವನ್ನು ಕೈಗೊಳ್ಳುತ್ತಾರೆ. ಧಾರ್ಮಿಕ ಕ್ಷೇತ್ರಗಳ ದರ್ಶನಕ್ಕಾಗಿ ಕೂಡ ಪ್ರವಾಸವನ್ನು ಕೈಗೊಳ್ಳುತ್ತಾರೆ. ಯಾವುದೇ ವಿಧವಾದ ಪ್ರವಾಸವನ್ನು ಕೈಗೊಂಡರೂ ಕೂಡ ಅದರ ಮೂಲ ಉದ್ದೇಶ ಮನರಂಜನೆಯನ್ನು ಪಡೆಯುವುದಾಗಿರುತ್ತದೆ.

ಪ್ರವಾಸ ಅನ್ನುವಂಥಹ ಒಂದು ವಿಷಯದ ಬಗ್ಗೆ ಜಿ.ಎಸ್. ಶಿವರುದ್ರಪ್ಪನವರು ಹೀಗೆ ವಿವರಿಸುತ್ತಾರೆ. "ಪ್ರವಾಸ ಅನ್ನುವಂಥ ಕಲ್ಪನೆ ಇದೆಯಲ್ಲ ಅದು ಭಾರತೀಯ ಮನೋಧರ್ಮಕ್ಕೆ ಆಧುನಿಕ ಅರ್ಥದಲ್ಲಿ ಹೊಂದುವಂಥದಲ್ಲ. ಏಕೆಂದರೆ ಸುಮ್ಮನೆ ಸಂತೋಷಕ್ಕೋಸ್ಕರ ಸಂಚಾರ ಮಾಡುವುದು ಭಾರತೀಯ ಮನಸ್ಸಿಗೆ ಒಗ್ಗುವಂಥಹ ವಿಷಯವಲ್ಲ. ಅದೇನಿದ್ದರೂ ತೀರ್ಥಯಾತ್ರೆಯನ್ನು ಇಷ್ಟಪಡುವಂಥಹ ಮನಸ್ಸು ಅದು. ನಮ್ಮಲ್ಲಿ ಶುದ್ಧ ಪ್ರವಾಸ ಇಲ್ಲವೇ ಇಲ್ಲ. ಏನಿದ್ದರೂ ಪುಣ್ಯಕ್ಷೇತ್ರಗಳನ್ನು ಹುಡುಕಿಕೊಂಡು ಹೋಗಿ, ನದಿಗಳಲ್ಲಿ ಸ್ನಾನ ಮಾಡಿ, ಬೆಟ್ಟಗಳನ್ನು ಹತ್ತಿ, ಅಲ್ಲಿ ದೇವರ ದರ್ಶನ ಮಾಡಿಕೊಂಡು ಪಾಪ ಪರಿಹಾರ ಮತ್ತು ಪುಣ್ಯ ಸಂಪಾದನೆ ಇತ್ಯಾದಿಗಳಿಗೆ ಬದ್ಧವಾದ ಒಂದು ಸಂಚಾರವಾಗಿರುತ್ತದೆಯೇ ಹೊರತಾಗಿ ಆಧುನಿಕ ಅರ್ಥದ ಪ್ರವಾಸ ಅಂತ ಏನು ಕರೀತೀವಿ ಆ ಕಲ್ಪನೆ ನಮ್ಮಲ್ಲಿ ಇಲ್ಲ."[೬]

---

[೬] ಮಲ್ಲೇಪುರಂ ಜಿ. ವೆಂಕಟೇಶ. ಪ್ರವಾಸ ಸಾಹಿತ್ಯ ಒಂದು ಅಧ್ಯಯನ. ಪು. ೧೧.

'ದೇಶ ನೋಡು ಕೋಶ ಓದು' ಎಂಬ ಗಾದೆಯ ಮಾತೊಂದು ನಮ್ಮಲ್ಲಿ ಬಳಕೆಯಲ್ಲಿದೆ. ಸುತ್ತಾಡಿ ದೇಶ ನೋಡುವುದರಿಂದ, ನಮ್ಮ ಜ್ಞಾನ ಹೆಚ್ಚುತ್ತದೆಂಬುದು ಅದರ ಅರ್ಥವಲ್ಲ. ಸುತ್ತಾಟದ ಅವಧಿಯಲ್ಲಿ ನಮ್ಮ ಇಂದ್ರಿಯಗಳು, ಭಾವಗಳು ಸುತ್ತಣ ಪ್ರಪಂಚಕ್ಕೆ ಸ್ಪಂದಿಸಬೇಕು. ಕಣ್ಣು ಹರಿಬಿಟ್ಟ ಕಡೆ ಇಂದ್ರಿಯಗಳಷ್ಟೇ ಅಲ್ಲ, ಭಾವಗಳ ದಳಗಳು ಅರಳಬೇಕು. ಆಗ ಪ್ರಕೃತಿ ತನಗೆ ತಾನೇ ನಮ್ಮ ಇಂದ್ರಿಯ ಹಾಗೂ ಭಾವಗಳಿಗೆ ಸಮಾರಾಧನೆಯನ್ನು ಒದಗಿಸುತ್ತದೆ. ಈ ಸಮಾರಾಧನೆಯಲ್ಲಿ ಸಿಂಹಪಾಲು ಕಣ್ಣು ಮತ್ತು ಮನಗಳದ್ದು, ಪ್ರವಾಸವು ಬಹಳ ಮಂದಿ ಗ್ರಹಿಸಿರುವಂತೆ ಖುಷಿಗಾಗಿ, ಮನರಂಜನೆಗಾಗಿ, ಯಾಂತ್ರಿಕ ಬದುಕಿನ ಜಡತ್ವದ ನಿವಾರಣೆಗಾಗಿ ಅಲ್ಲ. ಈ ಎಲ್ಲಾ ಲೌಕಿಕ ವಲಯವನ್ನು ನಮ್ಮ ಉದ್ದೇಶವನ್ನು ಮೀರಿ ನಿಲ್ಲಬೇಕು. ನಮ್ಮ ಪ್ರವಾಸ ಕೇವಲ ಖುಷಿಗಾಗಿ ಅಲ್ಲ. ತಾತ್ಕಾಲದ ಮನರಂಜನೆಗಾಗಿಯಲ್ಲ. ದುಡಿತದಿಂದಾದ ಜಡತ್ವದ ನಿವಾರಣೆಗಾಗಿಯಲ್ಲ. ಅದು ಅನುಭವ ಶೋಧನೆಯತ್ತ ನಡೆಸುವ ರಸಯಾತ್ರೆ. ಹೃದಯ ವಿಕಸನಕ್ಕೆ ಹೃದಯ-ಹೃದಯಗಳ ಗ್ರಹಿಕೆಗೆ ಸಾಮಿಪ್ಯಕ್ಕೆ, ಸಂವಾದಕ್ಕೆ ಅಣಿಗೊಳಿಸುವ 'ವಿಹಾರ' ಹೃದಯ ವಿಹಾರ.[೭]

ನಮ್ಮ ಯಾತ್ರೆ ಬರೀ ಮನಸ್ಸಿಗೆ ಸಂತೋಷವನ್ನುಂಟು ಮಾಡುವುದಿಲ್ಲ. ಅದು ಹೊಸ ಅನುಭವಗಳನ್ನು, ಸೃಷ್ಟಿಯ ವಿಸ್ಮಯಗಳನ್ನು, ಹೃದಯ ಗ್ರಾಹ್ಯವಾಗುವಂತೆ ಜ್ಞಾನ ದಿಗಂತವನ್ನು ವಿಸ್ತರಿಸುವ ಯಾತ್ರೆಯಾಗಬೇಕು. ಹಾಗಾದರೆ ಮಾತ್ರ ಪ್ರವಾಸಕ್ಕೆ ಒಂದು ಅರ್ಥ ಬರುತ್ತದೆ.

"ಇದ್ದ ಕಡೆಯೇ ಇದ್ದು, ಮಾಡಿದ ಕೆಲಸವನ್ನೇ ಮಾಡಿ, ನೋಡಿದ ನೋಟವನ್ನೇ ನೋಡಿ, ಆಡಿದ ಮಾತನ್ನೇ ಆಡುತ್ತಾ ಬದುಕು ಸಾಗಿಸುವಿಕೆ ಜೀವನವನ್ನು ನೀರಸಗೊಳಿಸುತ್ತದೆ. ಬದುಕು ರಸಪೂರ್ಣವಾಗಬೇಕಾದರೆ ಹೊಸತು ಅದಕ್ಕೆ ಬೇಕು. ಪ್ರವಾಸ ನಿತ್ಯದ ಏಕತಾನದಿಂದ ಬಿಡುಗಡೆಗೊಳಿಸಿ ನವೀನತೆಯನ್ನು ಒದಗಿಸುತ್ತದೆ."[೮]

ಪ್ರವಾಸ ಬದುಕಿನಲ್ಲಿ ಬರಿದಾಗದ ಅನುಭವಗಳ ಹಸಿರಾಗಿರುವ ನೆನಪುಗಳ ಸದಾ ಚೈತನ್ಯದ ಚಿಲುಮೆಯಾಗಬೇಕು. ಇದು ಬದುಕಿನಲ್ಲಿ ನೆನಪಿನ ಮೂಲಕ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತದೆ. ಈ ಸಂತೋಷವನ್ನು ಮಾತಿನಲ್ಲಿ ಸೆರೆ ಹಿಡಿಯಲಾಗದು.

---

[೭] ಡಾ. ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ೧೩೧-೧೩೨.
[೮] ಡಾ. ಡಿ.ಬಿ. ರಾಮಚಂದ್ರಚಾರ್ : ಮೂರುವಾರ ಮೂರು ಕಡೆ ಪು. ೮.

ಕಂಡ ಅನುಭವ ಬದುಕಿನಲ್ಲಿ ಸ್ವಲ್ಪ ಮಟ್ಟಿಗೆ ಮುಂದಿನ ಹಾದಿ ಸುಗಮವಾಗಿ ಸುಖಕರವಾಗಿರುವಂತೆ ಮಾಡುತ್ತದೆ.

ಪ್ರವಾಸ ನಮ್ಮ ಅನುಭವವನ್ನು ಹಿಗ್ಗಿಸಲು ಮುಖ್ಯವಾದ ಸಾಧನವಾಗಿದೆ. ನೋಡುವ, ಕೇಳುವ, ಗ್ರಹಿಸುವ ಮೂಲಕ ಸಂಚಾರವು ನಮ್ಮ ಅನುಭವಕ್ಕೊಂದು ಅರ್ಥವಂತಿಕೆಯನ್ನು, ಮೆರಗನ್ನು ಕೊಡುತ್ತದೆ. ಪ್ರವಾಸದಿಂದ ಇಂದ್ರಿಯಹಾಗೂ ಭಾವಗಮ್ಯವಾದ ಸುಖವು ಅನುಭವಗಳ ಮೂಲಕ ದೊರೆಯುತ್ತದೆ. ಪ್ರವಾಸದ ಸಂದರ್ಭದಲ್ಲಿ ಕಂಡ ದೇಶಗಳ, ಜನಗಳ, ನದಿ–ಕಾಡುಗಳ, ನೆಲ–ಜಲ, ಇತಿಹಾಸ–ಕಲೆ–ಸಾಹಿತ್ಯ–ಸಂಸ್ಕೃತಿಯ ಜೊತೆಗೆ ಅರ್ಥಪೂರ್ಣವಾದ ಸಂಬಂಧವನ್ನು ಪ್ರವಾಸಿಗರು ಬಳಸಿಕೊಂಡಾಗ ಪ್ರವಾಸಿಗನಲ್ಲಿ ಒಂದು ತೃಪ್ತಿ ದೊರೆತ ಅನುಭವವಾಗುತ್ತದೆ. ಕುವೆಂಪುರವರು ಹೇಳುವಂತೆ "ಪ್ರತ್ಯಕ್ಷಾನುಭವ ಇಲ್ಲವೇ ಅಪರೋಕ್ಷಾನುಭವಗಳಿಂದ ಮನಸ್ಸು ಗರಿಗೆದರುತ್ತದೆ. ಬದುಕಿಗೆ ಚೈತನ್ಯದ ನವವರ್ಷ ತುಂಬುತ್ತದೆ. ನಾವು ಹೊಸಬರಾಗುತ್ತೇವೆ. ಇದೇ ಜೀವಂತಿಕೆಯ ಲಕ್ಷಣ."[೯]

ಪ್ರವಾಸವನ್ನು ಕೈಗೊಂಡ ಪ್ರವಾಸಿಗ ತಾನು ಸುತ್ತಾಡಿದ ಪ್ರದೇಶಗಳಲ್ಲಿ ಕಂಡುಂಡ ಅನುಭವಗಳು, ನಿಸರ್ಗದ ಚೆಲುವು, ಜನರೊಡನೆ ಒಡನಾಟ ಅವನ ಬದುಕಿನಲ್ಲಿ ಹೊಸತನವನ್ನುಂಟು ಮಾಡುತ್ತದೆ. ಅವನಿಗೆ ಅಪೂರ್ವವಾದ ಅನುಭವಗಳು ದೊರೆಯುತ್ತವೆ. ಇದರಿಂದ ಅವನಲ್ಲಿ ಬದಲಾವಣೆಗಳುಂಟಾಗಿ ಅವನಲ್ಲಿ ಹೊಸ ಜೀವ ಪ್ರಫುಲ್ಲಗೊಂಡು ಮುದತಾಳುತ್ತದೆ. ಮನಸ್ಸು ಗರಿಬಿಚ್ಚಿದ ನವಿಲಾಗುತ್ತದೆ.

ವಿ.ಕೃ. ಗೋಕಾಕರು "ಪ್ರವಾಸ ಹಾಗೂ ಪ್ರವಾಸ ಸಾಹಿತ್ಯಗಳು ನನ್ನ ಬದುಕಿನಲ್ಲಿ ವಿಶೇಷ ಸ್ಥಾನ ಪಡೆದಿದೆ . . . . . ಬದುಕಿನ ಆಳ, ವೈಶಾಲ್ಯ ಹಾಗೂ ಉದ್ದಳತೆಗಳನ್ನು ಅಳೆಯಲೆಂದೇ ಪ್ರವಾಸ ಸಾಹಿತ್ಯ ಹುಟ್ಟಿದೆ"[೧೦] ಎಂದು ಅದರ ಮಹತ್ವವನ್ನು ಕುರಿತು ಪ್ರಸ್ತಾಪಿಸುತ್ತಾರೆ. ಪ್ರವಾಸ ಕೈಗೊಂಡ ದೇಶದ ಜನರ ಬದುಕಿನ ರೀತಿ ನೀತಿ, ಸಾಮಾಜಿಕ ಬದಲಾವಣೆಗಳು, ನವನಾಗರೀಕತೆಯ ಒಳ್ಳೆಯ ಗುಣಗಳನ್ನು ಮತ್ತು ಆಚಾರ–ವಿಚಾರಗಳಿಂದ ಜೀವನಕ್ಕೆ ಪೂರಕವಾದ ಒಳ್ಳೆಯ ವಿಷಯಗಳನ್ನು ಗ್ರಹಿಸಿ ಬದುಕಿನಲ್ಲಿ ಅಳವಡಿಸಿಕೊಂಡು ಜೀವನವನ್ನು ಸುಂದರವಾಗಿಸಿಕೊಳ್ಳಲು ಇವು ಒಂದು ರೀತಿಯಲ್ಲಿ ಕಾರಣವಾಗುತ್ತವೆ.

---

[೯] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೩೩.
[೧೦] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ. ಪು. ೧೩೩.

ಪ್ರವಾಸ ಮಾಡಿದ ದೇಶದ ಪರಿಚಯ, ಅದರ ಹಿರಿಮೆ–ಗರಿಮೆ, ಸಾಹಿತ್ಯ ಕಲೆಯನ್ನು ಒಳಗೊಂಡಿರುತ್ತದೆ. ಇವುಗಳ ಮೂಲಕ ಆ ದೇಶದ ಇತಿಹಾಸ ಮತ್ತು ಸಾಹಿತ್ಯದ ಸಂಪೂರ್ಣವಾದ ಪರಿಚಯವುಂಟಾಗುತ್ತದೆ. ಮತ್ತು ಅಲ್ಲಿನ ಪ್ರಾಕೃತಿಕ ಸಂಪತ್ತು, ದೇವಾಲಯಗಳು, ಜನರ ಆಚಾರ–ವಿಚಾರಗಳು, ಅವರ ನಂಬಿಕೆ–ಸಂಪ್ರದಾಯಗಳು, ಅಲ್ಲಿನ ಜನರ ಬದುಕು–ಬವಣೆಗಳು, ಅಲ್ಲಿನ ಜನರು ಬೇರೆ ಜನರ ಜೊತೆ ನಡೆದುಕೊಳ್ಳುವ ರೀತಿ, ಸ್ನೇಹಪರತೆ, ಸೌಜನ್ಯಯುತ ನಡತೆ, ಅವರ ಜೀವನ ಮೌಲ್ಯಗಳ ಅರಿವಾಗುತ್ತದೆ. ಇದರೊಂದಿಗೆ ಅಲ್ಲಿನ ಜಾನಪದ, ಕಲೆ ಹಾಗೂ ಕಲಾವಿದರ ಜೀವನದ ಪರಿಚಯವಾಗುತ್ತದೆ. ಇಂತಹ ಒಂದು ಅನುಭವಗಳು ದೊರೆಯುವುದು ಪ್ರವಾಸದಿಂದ ಮಾತ್ರ ಸಾಧ್ಯ. ಇವೆಲ್ಲವನ್ನು ನಾವು ನೋಡಿ ನಮ್ಮ ಜ್ಞಾನದ ಪರಿಧಿಯನ್ನು ವಿಸ್ತರಿಸಿಕೊಳ್ಳಲು ಅನುಕೂಲವಾಗುತ್ತದೆ.

ಹೀಗೆ ಪ್ರವಾಸವನ್ನು ಕೈಗೊಂಡು ಅದರ ಅನುಭವಗಳನ್ನು ಅಕ್ಷರ ರೂಪದಲ್ಲಿ ಅಭಿವ್ಯಕ್ತಿಗೊಳಿಸಿ, ಇತರರಿಗೂ ಪ್ರವಾಸದ ಅನುಭವವಾಗುವಂತೆ ಮಾಡುವುದೇ ಪ್ರವಾಸ ಸಾಹಿತ್ಯ. "ಪ್ರವಾಸ ಸಾಹಿತ್ಯವನ್ನು ಇಂಗ್ಲೀಷ್‌ನಲ್ಲಿ 'ಟ್ರಾವೆಲೋಗ್' (Travelogue) ಅಥವಾ ಟ್ರಾವಲ್ ಲಿಟರೇಚರ್ (Travel Literature) ಎಂದು ಕರೆಯಲಾಗುತ್ತದೆ. ಆದರೆ ಇದನ್ನು ಇಂಗ್ಲೀಷ್‌ನ ಯಾವುದೇ ಕೋಶಗಳೂ ವಿವರಿಸಿಲ್ಲ. ಸಾಹಿತ್ಯದ ಪರಿಭಾಷಾ ಶಬ್ಧಗಳನ್ನು (Literary Terms) ಕುರಿತಂತೆ ಜೋಸೆಫ್ ಷಿಪ್ಲಿ, ರೋಜರ್ ಪ್ಲಾವರ್ ಮತ್ತು ಜೆ.ಎ. ಸೆಡನ್ ಮತ್ತಿತರರು ಬರೆದ ಕೃತಿಗಳಲ್ಲಿ ಕೂಡ ಟ್ರಾವಲೋಗನ ಸೂತ್ರ ವಿವರಣೆಗಳಿರುವುದು ಕುತೂಹಲಕರವಾದದ್ದು. ಅಲ್ಲೆಲ್ಲಾ ಪ್ರವಾಸ ಸಾಹಿತ್ಯವನ್ನು ಒಂದು ಗಂಭೀರವಾದ ಪ್ರಮುಖವಾದ ಸಾಹಿತ್ಯ ಪ್ರಕಾರ ಎಂದು ಭಾವಿಸಿದಂತಿಲ್ಲ"[೧೧] ಎಂದು ಡಾ.ಎನ್.ಎಸ್. ತಾರಾನಾಥ್‌ರವರು ಪ್ರವಾಸ ಸಾಹಿತ್ಯ ಕೃತಿಯಲ್ಲಿ ಪ್ರವಾಸ ಸಾಹಿತ್ಯದ ಬಗ್ಗೆ ತಿಳಿಸುತ್ತಾರೆ.

ಪ್ರವಾಸ ಸಾಹಿತ್ಯ ಎಂದರೇನು? ಎಂಬುದು ಸರಳವಾದ ಪ್ರಶ್ನೆಯಾದರು, ಈ ಬಗ್ಗೆ ಹೆಚ್ಚಿನ ಚಿಂತನೆ ನಡೆದಿಲ್ಲ ಎಂದು ಮಲ್ಲೇಪುರಂ, ಜಿ. ವೆಂಕಟೇಶ್‌ರವರು ಅಭಿಪ್ರಾಯಪಡುತ್ತಾರೆ. ಪ್ರವಾಸ ಸಾಹಿತ್ಯ ಎಂದರೇನು? ಎಂಬ ಪ್ರಶ್ನೆಗೆ ಡಾ.ಎನ್.ಎಸ್. ತಾರಾನಾಥ್‌ರವರು ಹೇಳುವಂತೆ "ಒಬ್ಬ ವ್ಯಕ್ತಿ ತನ್ನದಾದಂತಹ ಊರು/ಜಾಗವನ್ನು ಬಿಟ್ಟು ತನ್ನದಲ್ಲದಂತಹ ಇನ್ನೊಂದು ಊರು/ಜಾಗಕ್ಕೆ ಹೋಗಿ ಆ ಪ್ರದೇಶವನ್ನು ಸುತ್ತಿ ಬಂದು ಆ ಹೊಸ ಜಾಗದಲ್ಲಿ ಆದಂತಹ

[೧೧] ಸಂ. ಮಲ್ಲೇಪುರಂ ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೨೫.

ಅನುಭವಗಳನ್ನು ಬಣ್ಣಿಸಿದ. ಅಲ್ಲಿ ನೋಡಿದಂತಹ ಪ್ರೇಕ್ಷಣೀಯ ಸ್ಥಳಗಳನ್ನು ವರ್ಣಿಸಿದ ಅಲ್ಲಿನ ಜನರ ರೀತಿ–ನೀತಿ–ಜೀವನ ವಿಧಾನಗಳನ್ನು ವಿವರಿಸುವ ಸಾಹಿತ್ಯವನ್ನು ಸ್ಥೂಲವಾಗಿ ಪ್ರವಾಸ ಸಾಹಿತ್ಯವೆಂದು ಕರೆಯಬಹುದು."[೧೨]

ಪ್ರವಾಸ ಸಾಹಿತ್ಯದ ಒಳಮೈ ಲಕ್ಷಣಗಳನ್ನು ನಾಲ್ಕು ನೆಲೆಗಳಲ್ಲಿ ಹೀಗೆ ಗುರುತಿಸಬಹುದೆಂದು ತೋರುತ್ತದೆ.

೧. ಗದ್ಯ ನಿರೂಪಣೆ

೨. ಕಥಾನಾತ್ಮಕ ಶೈಲಿ

೩. ಆತ್ಮಕಥನದ ನಿವೇದನೆ

೪. ಪ್ರವಾಸ ಕಥನದ ವಸ್ತು ದ್ರವ್ಯ

ಕನ್ನಡದಲ್ಲಿ ಬಂದಿರುವ ಎಲ್ಲ ಪ್ರವಾಸ ಕೃತಿಗಳೂ ಕೂಡ ಗದ್ಯ ರೂಪದಲ್ಲೇ ಇವೆ. ಅವು ಕೇವಲ ಒಣಗದ್ಯವಾಗದೆ; ಕಥನಾತ್ಮಕ ನೆಲೆಯನ್ನು ಪಡೆದಿದೆ. ವಿ.ಸೀ ಅವರ "ಪಂಪಾಯಾತ್ರೆ"ಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ತನಗಾದ ಅನುಭವವನ್ನು ಆತ್ಮಕಥನದ ನೆಲೆಯಲ್ಲಿ ನಿವೇದಿಸಿಕೊಳ್ಳುವುದು ಮೂರನೆಯ ಹೆಜ್ಜೆಯಾದರೆ, ತಾನು ಹೋಗಿ ಬಂದ ಜಾಗದಲ್ಲಿ ಆದ ಪರಸ್ಥಳಾನುಭವಗಳು ಬರವಣಿಗೆಗೆ ಕೂತಾಗ ವಸ್ತು ದ್ರವ್ಯವು ಪ್ರವಾಸ ಕಥನದ ಹಿನ್ನೆಲೆಯಲ್ಲಿ ನಮ್ಮ ಮನಸ್ಸನ್ನು ತುಂಬುತ್ತದೆ. ಇದು ನಾಲ್ಕನೇಯ ಹೆಜ್ಜೆಯಾಗುತ್ತದೆ.

ಪ್ರವಾಸ ಸಾಹಿತ್ಯವನ್ನು ಹೀಗೆ ವಿಂಗಡಿಸುವುದೆಂಬುದಕ್ಕೆ ವರದರಾಜ ಹೊಯಿಲಗೋಳರು ರೂಪವನ್ನು (Form) ಆಧರಿಸಿ.

೧. ಪತ್ರರೂಪ ಪ್ರವಾಸ ಸಾಹಿತ್ಯ

೨. ದಿನಚರಿ ಪ್ರವಾಸ ಸಾಹಿತ್ಯ

೩. ಕಥಾರೂಪ ಪ್ರವಾಸ ಸಾಹಿತ್ಯ

ಹೀಗೆಂದು ಮೂರು ಬಗೆಗಳನ್ನು ಗುರುತಿಸಿದ್ದಾರೆ. ಸಾ.ಶಿ ಮರುಳಯ್ಯರವರು ಇನ್ನೊಂದು ತೆರನಾಗಿ ವಿಂಗಡಿಸಿದ್ದಾರೆ. ಇದು ಮುಖ್ಯವಾಗಿ ಪ್ರವಾಸಿ ಅಥವಾ ಕಥನಕಾರ ಯಾವ

---

[೧೨] ಸಂ. ಮಲ್ಲೇಪುರಂ ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೨೬.

ಉದ್ದೇಶವನ್ನು ಇಟ್ಟುಕೊಂಡು ಪ್ರವಾಸ ಮಾಡಿ ಪುಸ್ತಕ ಬರೆದಿದ್ದಾನೆ ಎಂಬುದನ್ನೇ ಮುಖ್ಯವಾಗಿ ಆಧರಿಸಿದೆಯಷ್ಟೆ. ಅವರು ವರ್ಗೀಕರಿಸಿರುವುದು ಹೀಗೆ.

೧. ತೀರ್ಥಯಾತ್ರೆ ಪ್ರವಾಸ ಸಾಹಿತ್ಯ

೨. ಸಾಂಸ್ಕೃತಿಕ ಪ್ರವಾಸ ಸಾಹಿತ್ಯ

೩. ಶೈಕ್ಷಣಿಕ ಪ್ರವಾಸ ಸಾಹಿತ್ಯ

೪. ವ್ಯವಹಾರಿಕ ಪ್ರವಾಸ ಸಾಹಿತ್ಯ

೫. ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ

ಎಂದು ವಿಂಗಡಿಸಿದ್ದಾರೆ.[೧೩]

ಕನ್ನಡದಲ್ಲಿ ಮೊದಲಿಗೆ ಬಂದ ಪ್ರವಾಸ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನವು ತೀರ್ಥಕ್ಷೇತ್ರಗಳ ಪರಿಚಯದ ಕೃತಿಗಳೇ ಏಕೆಂದರೆ ಭಾರತೀಯರು ಪ್ರವಾಸ ಕೈಗೊಳ್ಳುವುದೆಂದರೆ ತೀರ್ಥಕ್ಷೇತ್ರಗಳಿಗೆ ಹೋಗಿ ದೇವರ ದರ್ಶನವನ್ನು ಮಾಡುವುದೇ ಅವರ ಪ್ರವಾಸ ಉದ್ದೇಶವಾಗಿರುತ್ತದೆ. ಅಲ್ಲಿ ಹೋಗಿ ಬಂದವರು, ಅಲ್ಲಿನ ಶ್ರೀಕ್ಷೇತ್ರದ ಮಹಿಮೆ, ಗುಣಾವಳಿಗಳನ್ನು ಹೇಳುವುದೇ ಪ್ರಮುಖವಾಗಿರುತ್ತದೆ. ಇತರೆ ಸಾಹಿತ್ಯಕವಾದ ಅಂಶಗಳು ಕಡಿಮೆಯಾಗಿರುತ್ತದೆ. ಅವು ದೇವರ ಮಹಿಮೆಯನ್ನು ಸಾರುವ ಕೃತಿಗಳಾಗಿದ್ದವು. ಉಪಲಬ್ಧ ಆಧಾರಗಳ ಮೇಲೆ ಹೇಳುವುದಾದರೆ ಸದ್ಯಕ್ಕೆ ಕನ್ನಡದಲ್ಲಿ ಬಂದ ಪ್ರವಾಸ ಕೃತಿಯೆಂದರೆ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಬಂದ 'ಸೂರಿ ವೆಂಕಟರಮಣ ಶಾಸ್ತ್ರಿ'ಗಳ 'ದಕ್ಷಿಣ ಭಾರತ ಯಾತ್ರೆ', ಆದರೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಸಮೃದ್ಧವಾಗಿ ಬಂದದ್ದು ೨೦ನೇ ಶತಮಾನದ ಮಧ್ಯಭಾಗದಲ್ಲಿಯೇ.

ಕಥನಾತ್ಮಕವಾದ ಪ್ರವಾಸ ಸಾಹಿತ್ಯವು ಗದ್ಯರೂಪದಲ್ಲಿದ್ದು, ಪ್ರಬಂಧ ಶೈಲಿಯನ್ನು ಹೊಂದಿವೆ. ಅದು ರಸವತ್ತಾದ ಕಾದಂಬರಿಯಂತೆ ಸುಲಭವಾಗಿ ಓದಿಸಿಕೊಂಡು ಹೋಗಬೇಕು. ಕಥೆ–ಕಾದಂಬರಿಗಳಲ್ಲಿ ಸಿದ್ಧವಸ್ತು–ಪಾತ್ರ–ಸನ್ನಿವೇಶಗಳಿರುವುದರಿಂದ ಹಾಗೂ ಅಲ್ಲಿ ಮುಖ್ಯವಾಗಿ ಒಂದು ಕಥಾ ಸೂತ್ರವಿರುವುದರಿಂದ ಅವು ಎಲ್ಲ ವರ್ಗದ ಜನರನ್ನು ಆಕರ್ಷಿಸುತ್ತದೆ. ಪ್ರವಾಸ ಸಾಹಿತ್ಯದಲ್ಲಿ ಕಾದಂಬರಿಯಲ್ಲಿರುವಂತೆ ಕಲ್ಪನಾಂಶವಿದ್ದು, ಅನುಭವ ನಿರೂಪಣೆಗೆ ಹೆಚ್ಚಿನ ಆದ್ಯತೆ, ಅದಕ್ಕೆ ತನ್ನದೇ ಆದ ನಿರ್ಧಿಷ್ಟ ಓದುಗನ ವಲಯವಿದೆ. ಬೌದ್ಧಿಕವಾಗಿ ಬೆಳೆದವರಿಗೆ ಬಹುಶಃ ಪ್ರಿಯವಾಗಬಹುದಾದ ಸಾಹಿತ್ಯ ಪ್ರಕಾರವಿದೆನ್ನಬಹುದು.

ಕನ್ನಡ ಸಾಹಿತ್ಯದಲ್ಲಿ ಪ್ರವಾಸ ಸಾಹಿತ್ಯ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಪ್ರವಾಸ ಸಾಹಿತ್ಯವನ್ನು ಅನೇಕ ಪ್ರಸಿದ್ಧರಾದ ಬರಹಗಾರರು ಬರೆದಿದ್ದಾರೆ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಪಡದ ಅನೇಕರು ತಾವು ಕೈಗೊಂಡ ಪ್ರವಾಸದ ಅನುಭವಗಳನ್ನು ಅಕ್ಷರ ರೂಪದಲ್ಲಿ ಓದುಗರೊಂದಿಗೆ ಹಂಚಿಕೊಂಡಿದ್ದಾರೆ.

ಕನ್ನಡದಲ್ಲಿ ಪ್ರವಾಸ ಕಥನಗಳೇನೋ ಬಹಳವಾಗಿವೆ. ಆದರೆ ಪ್ರವಾಸ ಸಾಹಿತ್ಯದ ಸ್ವರೂಪ–ಲಕ್ಷಣ, ರೀತಿ–ನಿಯಮಗಳನ್ನು ಕುರಿತಂತೆ ಬರಹಗಳಿದ್ದಂತಿಲ್ಲ. ‘ವಿಶ್ವಕೋಶ’ ಸಂಪುಟಗಳಲ್ಲಿ ಚದುರಿರುವ ಕೆಲವು ಕಿರು ಬರಹಗಳು, ಸಾ.ಶಿ. ಮರುಳಯ್ಯನವರ ‘ಕನ್ನಡ ನುಡಿ’ ಬೆಳ್ಳಿ ಸಂಚಿಕೆಯಲ್ಲಿ ಒಂದು ಲೇಖನ, ವರದರಾಜ ಹುಯಿಲಗೋಳರ ‘ಪ್ರಬುದ್ಧ ಕರ್ನಾಟಕ’ದ ಚಿನ್ನದ ಸಂಚಿಕೆಯ ಒಂದು ಲೇಖನ ಇವನ್ನುಳಿದರೆ ಕನ್ನಡದಲ್ಲಿ ಎದ್ದು ಕಾಣುವ ಬೇರೆ ಬರಹಗಳಾವುವೂ ಇಲ್ಲ. ಕನ್ನಡದಲ್ಲಿರಲಿ, ಇಂಗ್ಲೀಷನಲ್ಲೇ ಪ್ರವಾಸ ಸಾಹಿತ್ಯದ ವಿಶ್ಲೇಷಣೆ ಮಾಡಿರುವ ಕೃತಿಗಳಿಲ್ಲ "ಇಂಗ್ಲೀಷ್‌ನಲ್ಲಿ ಪ್ರವಾಸ ಸಾಹಿತ್ಯವನ್ನು ‘ಟ್ರಾವಲೋಗ್’ (Travelogue) ಅಥವಾ ‘ಟ್ರಾವಲ್ ಲಿಟರೇಚರ್’ (Travel Literature) ಎಂದು ಕರೆಯುತ್ತಾರೆ. ಆದರೆ ಈ ಟ್ರಾವಲೋಗ್/ಟ್ರಾವೆಲ್ ಲಿಟರೇಚರ್‌ನ್ನು ಇಂಗ್ಲೀಷಿನ ಯಾವುದೇ ಕೋಶಗಳೂ ವಿವರಿಸದೆ ಇರುವುದು ಆಶ್ಚರ್ಯಕರವಾದದ್ದು. ಸಾಹಿತ್ಯದ ಪರಿಭಾಷಾ ಶಬ್ಧಗಳನ್ನು (Literary Terms) ಕುರಿತಂತೆ ಜೋಸೆಷಿಪ್ಲಿ, ರೋಜರ್, ಪ್ಲಾವರ್ ಮತ್ತು ಜಿ.ಎ.ಸಡನ್ ಮತ್ತಿತರರು ಬರೆದ ಕೃತಿಗಳಲ್ಲಿ ಕೊಡ ಟ್ರಾವಲೋಗ್‌ನ ಸೂತ್ರ ವಿವರಣೆಗಳಿರದಿರುವುದು ಕುತೂಹಲಕರವಾದದ್ದು ಅಲ್ಲೆಲ್ಲ ಪ್ರವಾಸ ಸಾಹಿತ್ಯವನ್ನು ಒಂದು ಗಂಭೀರವಾದ ಪ್ರಮುಖವಾದ ಸಾಹಿತ್ಯ ಪ್ರಕಾರ ಎಂದು ಭಾವಿಸಿದಂತಿಲ್ಲ. ಆದ್ದರಿಂದ ಪ್ರವಾಸ ಸಾಹಿತ್ಯ ಎಂದರೇನು? ಎಂಬುದನ್ನು ನಾವೇ ಮೊದಲಿಗೆ ಹೇಳಬೇಕಾದ ಸ್ಥಿತಿಯುಂಟಾಗಿದೆ."[೧೪]

ಹಾಗಾದರೆ ಪ್ರವಾಸ ಸಾಹಿತ್ಯ ಎಂದರೇನು? ಒಬ್ಬ ವ್ಯಕ್ತಿ ತನ್ನದಾದಂತಹ ಒಂದು ಊರು/ಜಾಗವನ್ನು ಬಿಟ್ಟು ತನ್ನಲ್ಲಿದ್ದಂತಹ ಇನ್ನೊಂದು ಊರು/ಜಾಗಕ್ಕೆ ಹೋಗಿ ಆ ಪ್ರದೇಶವನ್ನು ಸುತ್ತಿಬಂದು ಆ ಹೊಸ ಜಾಗದಲ್ಲಿ ಆದಂತಹ ಅನುಭವಗಳನ್ನು ಬಣ್ಣಿಸಿದ, ಅಲ್ಲಿ ನೋಡಿದಂತಹ ಪ್ರೇಕ್ಷಣೀಯ ಸ್ಥಳಗಳನ್ನು ವರ್ಣಿಸಿದ. ಅಲ್ಲಿನ ಜನರ ರೀತಿ–ನೀತಿ, ಜೀವನ ವಿಧಾನಗಳನ್ನು ವಿವರಿಸಿದ ಸಾಹಿತ್ಯವನ್ನು ಸ್ಥೂಲವಾಗಿ ಪ್ರವಾಸ ಸಾಹಿತ್ಯವೆಂದು ಕರೆಯಬಹುದು. ಅಪರಿಚಿತವಾದ

---

[೧೪] ಸಂ. ಮಲ್ಲೇಪುರ, ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೩೦.

ಜಾಗವನ್ನು ನೋಡಲು ಪ್ರಯಾಣಕ್ಕೆ ಮಾಡಿಕೊಂಡ ಸಿದ್ಧತೆಗಳಿಂದ ಹಿಡಿದು, ತನ್ನ ಊರು/ನೆಲವನ್ನು ಮತ್ತೇ ತಲುಪುವವರೆಗಿನ ಎಲ್ಲ ಬಗೆಯ ಸರಳ, ಸಂಕೀರ್ಣ ಅನುಭವಗಳು ಇಂಥ ಪ್ರವಾಸ ಸಾಹಿತ್ಯ ಕೃತಿಗಳಲ್ಲಿ ಹರಳುಗಟ್ಟಿರುತ್ತವೆ. ಕನ್ನಡದಲ್ಲಿ ಬಂದಿರುವ ಪ್ರವಾಸ ಕೃತಿಗಳನ್ನು ಗಮನಿಸಿದರೆ ಪ್ರವಾಸ ಸಾಹಿತ್ಯದ ಕೆಲವು ಸಾಮಾನ್ಯ ಲಕ್ಷಣಗಳು ದೊರೆಯುತ್ತವೆ. ಅವು ಹೀಗಿದೆ;

೧. ಪ್ರವಾಸ ಸಾಹಿತ್ಯ ಬಹುಮಟ್ಟಿಗೆ ಗದ್ಯರೂಪದಲ್ಲಿರುತ್ತದೆ. ಬಹುಮಟ್ಟಿಗೆ ಏನು, ಒಂದೆರಡು ಅಪವಾದಗಳನ್ನು ಉಳಿದರೆ ಅದು ಗದ್ಯ ಬರಹವೇ ಆಗಿರುತ್ತದೆ. ಒಟ್ಟಿನಲ್ಲಿ ಅದೊಂದು ಗದ್ಯ ನಿರೂಪಣಾ. (Prose Narrative)

೨. ಪ್ರವಾಸ ಕಥನಗಳಲ್ಲಿ ಕೃತಿಯುದ್ಧಕ್ಕೂ ಪ್ರಧಾನವಾಗಿ ನಿರೂಪಣಾ ಶೈಲಿಯಲ್ಲಿರುತ್ತದೆ. ಸಂಭಾಷಣಾ ಶೈಲಿಯಾಗಲಿ, ಪದ್ಯ ವಿಧಾನ ಕ್ರಮವಾಗಲಿ ಅಥವಾ ನಾಟಕಗಳಲ್ಲಿ ಕಂಡುಬರುವ ಅಂಕ-ದೃಶ್ಯಗಳ ರಚನೆಯ ಚೌಕಟ್ಟಾಗಲಿ ಇಲ್ಲಿ ಕಾಣುವುದಿಲ್ಲ. ಸಂಭಾಷಣೆ, ಪದ್ಯಗಳು ಕೃತಿಯ ಒಡಲಲ್ಲಿ ಅಲ್ಲೋ-ಇಲ್ಲೋ ಇರಬಹುದು. ಆದರೆ ಪೂರ್ಣಕೃತಿ ಈ ಬಗೆಯಲ್ಲಿರುವುದಿಲ್ಲ. ಪ್ರವಾಸ ಕಥನಗಳಲ್ಲಿ ಒಟ್ಟು ನಮಗೆ ಕಂಡುಬರುವುದು 'ನೆರೇಟಿವ್ ಸ್ಟೈಲ್'

೩. ನಾನು ಎನ್ನುವ ಆತ್ಮ ವೃತ್ತಾಂತ ನಿರೂಪಣೆಯ ಕ್ರಮ. ಇಲ್ಲವೇ ದನಿ ಪ್ರವಾಸ ಕಥನದುದ್ದಕ್ಕೂ ಹರಿದಿರುತ್ತದೆ. ಪ್ರವಾಸ ಕಥನದ ಉಸಿರಾಟಕ್ಕೆ ಈ ನಿರಂತರ ಶ್ರುತಿಯೇ ಕಾರಣ. ಲೇಖಕ ತಾನು ಪ್ರವಾಸಿಯಾಗಿದ್ದುದನ್ನು ನೆನೆಸಿಕೊಂಡು ಸಂಗತಿಯನ್ನು ಅಥವಾ ವಿಷಯವನ್ನು ವರ್ಣಿಸಲು ಆರಂಭಿಸುತ್ತಾರೆ. ನಾನು ಹೋದೆ, ನನಗೆ ಈ ಅನುಭವವಾಯಿತು, ನಾನು ಇದನ್ನು ನೋಡಿದೆ, ನಾನು ಅಲ್ಲಿ ಓಡಾಡಿದೆ, ನನಗೆ ಹೀಗೆ ಕಂಡಿತು, ನಾನು ವೀಸಾ, ಪಾಸ್‌ಪೋರ್ಟ್ ಕಳೆದುಕೊಂಡೆ, ಈ ನಾನು, ನಾನು, ನಾನು ಎನ್ನುವ ದನಿ ಪ್ರವಾಸ ಸಾಹಿತ್ಯದಲ್ಲಿ ಎದ್ದು ಕಾಣುವ ಮಾತು.

೪. ಒಬ್ಬ ವ್ಯಕ್ತಿ ತಾನಿದ್ದ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗಿ ನಿಶ್ಚಿತ ಅವಧಿಯವರೆಗೂ ಅಲ್ಲಿದ್ದು, ಮತ್ತೆ ತಾನಿದ್ದ ಸ್ಥಳಕ್ಕೆ ವಾಪಸ್ಸು ಬರುವವರೆಗೆ ; ಆ ನಿಶ್ಚಿತ ಅವಧಿಯಲ್ಲಿ

---

[೧೪] ಸಂ. ಮಲ್ಲೇಪುರ ಜಿ. ವೆಂಕಟೇಶ್, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೨೫.

ಅವನಿಗಾಗುವ ಎಲ್ಲಾ ಬಗೆಯ ಪರಸ್ಥಳಾನುಭವಗಳೂ ಪ್ರವಾಸ ಕಥನದ ವಸ್ತು ದ್ರವ್ಯವಾಗುತ್ತದೆ. ಇದೂ ಪ್ರವಾಸ ಕಥನದ ಮುಖ್ಯವಾದ ಲಕ್ಷಣ. ಏಕೆಂದರೆ ಒಬ್ಬ ವ್ಯಕ್ತಿ ತನ್ನೂರನ್ನು ತೊರೆದು ದೇಶಾಂತರ ಮಾಡಿ ಆ ಇನ್ನೊಂದು ದೇಶದಲ್ಲಿಯೇ ನೆಲೆಸಿ ಏನಾದರೂ ಅದನ್ನು ಕುರಿತು ಬರೆದರೆ ಆಗ ಅದು ಪ್ರವಾಸ ಸಾಹಿತ್ಯ ಎನ್ನಿಸಿಕೊಳ್ಳುವುದಿಲ್ಲ. ಈ ನಾಲ್ಕು ಲಕ್ಷಣಗಳು ಪ್ರವಾಸ ಸಾಹಿತ್ಯದ ಚತುರಂಗಗಳು.

"ಪ್ರವಾಸ ಕಥನಗಳನ್ನು ಓದುವಾಗ ನಮಗೆ ಗೋಚರವಾಗುವ ಒಂದು ಪ್ರಧಾನ ಸಂಗತಿ ಲೇಖಕ ಅಪರಿಚಿತತೆಯೊಂದಿಗೆ ಮಾಡುವ ಒಡನಾಟ. ಈ ಬಗೆಯ ಲೇಖಕ ಎದುರುಗೊಳ್ಳುವುದು ಅಪರಿಚಿತವಾದ ವ್ಯಕ್ತಿಗಳು, ಅಪರಿಚಿತವಾದ ವಾತಾವರಣ, ಅಪರಿಚಿತವಾದ ವಸ್ತು, ಅಪರಿಚಿತವಾದ ದೃಶ್ಯಗಳನ್ನು ಇಂಥ ಕೃತಿಯ ಉದ್ದಕ್ಕೂ ಅಪರಿಚಿತನಾದ ವ್ಯಕ್ತಿ ವ್ಯಕ್ತಿಗಳ ವಾತಾವರಣವೇ ತುಂಬಿರುತ್ತದೆ. (Strange physical and personal environment) ಅದು ಲೇಖಕ ಅನೇಕ ಸಂದರ್ಭಗಳಲ್ಲಿ ಓದುಗ ಕೂಡ – ಅರಿಯದ ಜನ, ಅರಿಯದ ಜಾಗ, ಅರಿಯದ ಲೋಕ ವರ್ತನೆಗಳಿಂದ ಕಿಕ್ಕಿರಿದಿರುತ್ತದೆ. ಒಬ್ಬರನ್ನೊಬ್ಬರು ಅರಿಯಲು ತುಂಬಾ ಮುಖ್ಯವಾಗಿ ಬೇಕಾದದ್ದು ಭಾಷೆ, ನಿದರ್ಶನಕ್ಕೆ ಅಮೆರಿಕಾ ನಾವರಿಯದ ದೇಶ. ಆ ಜನರ ಜೊತೆ ಮಾತನಾಡಲು ಅಲ್ಲಿ ಓಡಾಡಲು ನಮಗೆ ಮೊದಲು ಇಂಗ್ಲೀಷ್ ಪರಿಚಯವಿರಬೇಕು. ಅದಿಲ್ಲದಿದ್ದರೆ ಒಂದೊಂದು ಗಳಿಗೆಯೂ ನಮಗೆ ಉಸಿರು ಕಟ್ಟುವ ಸನ್ನಿವೇಶವಾಗುತ್ತದೆ. ಹಾಗೆಯೇ ಜರ್ಮನಿಗೆ ಹೋದರೆ ಜರ್ಮನ್, ಫ್ರಾನ್ಸ್‌ಗೆ ಹೋದರೆ ಫ್ರೆಂಚ್, ಇಟಲಿಗೆ ಹೋದರೆ ಇಟ್ಯಾಲಿಯನ್ ಭಾಷೆಯ ಪರಿಚಯ ಅತಿ ಅಗತ್ಯವಿರುತ್ತದೆ. ಭಾಷಿಕ ಅಸಂವಹನತೆ ಒಂದು ಮುಖ್ಯ ತೊಡಕಾಗಿ ನಿಲ್ಲುತ್ತದೆ. ಅದಷ್ಟೇ ಸಾಕು ಅಪರಿಚಿತತೆಯನ್ನು ಉಂಟು ಮಾಡಲು. ಈ ಅಪರಿಚಿತತೆಯನ್ನು ಗೆಲ್ಲುತ್ತ, ದಾಟುತ್ತ, ಪರಿಚಿತವಾಗಿಸಿಕೊಳ್ಳತ್ತ ಹೋಗುವ ಪ್ರಕ್ರಿಯೆ ಪ್ರವಾಸ ಕಥನದುದ್ದಕ್ಕೂ ಕಾಣುತ್ತದೆ."[೧೫]

ಪ್ರವಾಸ ಕಥನದಲ್ಲಿ ಇನ್ನೊಂದು ದೇಶದ ಬಗ್ಗೆ ಲೇಖಕನ ಪ್ರತಿಕ್ರಿಯೆಯೇ, ಪುಸ್ತಕವನ್ನಾಕ್ರಮಿಸಿರುತ್ತದೆ. ಪ್ರವಾಸ ಕಾಲದಲ್ಲಿ ಈತನ ಮನಸ್ಸಿನಲ್ಲಿ ಉಂಟಾದ ಭಾವನೆ, ಇನ್ನೊಂದು ದೇಶದ ಬಗ್ಗೆ ಈತನಿಗೆ ಮಾಡಿದ ಮೆಚ್ಚುಗೆ – ತಿರಸ್ಕಾರ ಭಾವ ಇತ್ಯಾದಿಗಳನ್ನು ಈ ಕೃತಿ ರಚಿಸುವಾಗ ಆತ ತೋಡಿಕೊಳ್ಳುತ್ತಾನೆ. ಇದನ್ನು 'ಆಥರಿಯಲ್ ರೆಸ್ಪಾನ್ಸ್' (ಲೇಖಕ

[೧೫] ಸಂ. ಮಲ್ಲೇಪುರಂ. ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೨೭–೨೮.

ಪ್ರತಿಕ್ರಿಯೆ) ಎನ್ನಬಹುದು. ಇದು ಒಬ್ಬ ಲೇಖಕನಿಂದ ಇನ್ನೊಬ್ಬ ಲೇಖಕನಿಗೆ ಬದಲಾಗುತ್ತಾ ಹೋಗುತ್ತದೆ. ಅಮೆರಿಕಾ ದೇಶವನ್ನು ನೋಡಿದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅನುಭವಗಳೇ ಬೇರೆ. ಅದೇ ದೇಶವನ್ನು ನೋಡಿದ ಬಿ.ಜಿ.ಎಲ್.ಸ್ವಾಮಿ ಅವರಿಗಾಗುವ ಅನುಭವಗಳೇ ಬೇರೆ ಇಬ್ಬರು ಹಾಸ್ಯಮಯವಾಗಿ ಬರೆಯುವ ಲೇಖಕರೇ ಆದರೆ "ಅಮೇರಿಕಾದಲ್ಲಿ ಗೊರೂರು"ಗೂ "ಅಮೇರಿಕಾದಲ್ಲಿ ನಾನು"ಗೂ ತುಂಬಾ ವ್ಯತ್ಯಾಸವಿದೆ. ಎ.ಎಸ್. ಮೂರ್ತಿರಾಯರ "ಅಪರ ವಯಸ್ಕನ ಅಮೆರಿಕಾ ಯಾತ್ರೆ." ಈ ಎರಡಕ್ಕಿಂತ ಬೇರೆಯಾದುದು ಒಂದೇ ಅಮೇರಿಕಾ ದೇಶ. ಅದೇ ನ್ಯೂಯಾರ್ಕ್, ವಾಷಿಂಗ್‌ಟನ್, ಪೆನ್ಸಿಲ್‌ವೇನಿಯಾ, ಫೆಲಿಡಲ್ಫಿಯಾಗಳೇ ಆದರೆ ಒಬ್ಬೊಬ್ಬರ ಅನುಭವ ಒಂದೊಂದು ರೀತಿಯಲ್ಲಿರುತ್ತದೆ. ಈ ವೈವಿಧ್ಯಕ್ಕೆ ಬದಲಾವಣೆಗೆ "ಆಥರಿಯಲ್ ರೆಸ್ಪಾನ್ಸ್" ಕಾರಣ.[೧೬]

ಪ್ರವಾಸ ಕಥನಗಳಲ್ಲಿ ಕಾಣುವ ಮತ್ತೊಂದು ಗುಣ ಅದು : ಆತ್ಮಕಥನ ರೂಪವನ್ನು ಹೊಂದಿರುವಂಥದು. ಆತ್ಮಕಥನವೇ ಅಲ್ಲದಿದ್ದರೂ ಆತ್ಮಕಥನಕ್ಕೆ ಸಮೀಪವಾಗಿರುವ ಲಕ್ಷಣಗಳು ಅದರಲ್ಲಿರುತ್ತವೆ. ಒಬ್ಬ ಲೇಖಕ ಹೊರ ದೇಶದಲ್ಲಿ ಒಂದು ನಿಶ್ಚಿತ ಅವಧಿಯನ್ನು – ಅದು ಒಂದು ತಿಂಗಳಿರಲಿ, ಒಂದು ವರ್ಷವಿರಲಿ ಕಳೆಯುವಾಗ ತನಗಾಗುವ ವಾಸ್ತವಾನುಭವಗಳನ್ನು ಮಾತ್ರ ಬರವಣಿಗೆಯಲ್ಲಿ ಹಿಡಿದಿರುತ್ತಾನೆ. ಆದ್ದರಿಂದ ಅದು ಸಹಜವಾಗಿಯೇ ಆತ್ಮ ಕಥನ ರೂಪವನ್ನು ಪಡೆದುಕೊಳ್ಳುತ್ತದೆ. ಎಷ್ಟೋ ಜನರ ಜೀವನ ಚರಿತ್ರೆ ಬರೆಯಲು ಅವರ ಪ್ರವಾಸ ಕಥನಗಳನ್ನು ಒಂದು ಆಕರವಾಗಿ ಬಳಸಿರುವುದುಂಟು.

ಪ್ರವಾಸ ಸಾಹಿತ್ಯದಲ್ಲಿ ಪ್ರವಾಸಿಗ ತಾನು ಕಂಡ ಪ್ರೇಕ್ಷಣೀಯ ಸ್ಥಳಗಳ ವರ್ಣನೆ ಕೃತಿಯಲ್ಲಿ ಪ್ರಮುಖವಾಗಿರುತ್ತದೆ. ಈ ಸ್ಥಳಗಳು ಪ್ರಾಕೃತಿಕ, ರಾಜಕೀಯ, ಸಾಮಾಜಿಕ ಹಾಗೂ ಐತಿಹಾಸಿಕ ಪ್ರಾಮುಖ್ಯದ್ದಾಗಿರಬಹುದು. ಅಮೆರಿಕಾ ದೇಶಕ್ಕೆ ಹೋದ ಪ್ರವಾಸಿಯೊಬ್ಬ ಅಲ್ಲಿಯ White House, ನಯಾಗಾರಫಾಲ್ಸ್, ಹೈಡ್‌ಪಾರ್ಕ್, ಲೈಬ್ರರಿ ಆಫ್ ಕಾಂಗ್ರೆಸ್, ಡಿಸ್ನಿಲ್ಯಾಂಡ್ ಇಂಥವನ್ನು ಇತರ ತೊಂದರೆಗಳಿಲ್ಲದಿದ್ದಲ್ಲಿ ನೋಡಿಯೇ ತೀರುತ್ತಾನೆ. ಜಗತ್ತಿನ ಉದ್ದಗಲಕ್ಕೂ ಇವು ಹೆಸರು ಪಡೆದಿರುವುದರಿಂದ ಇವುಗಳ ವರ್ಣನೆಗೆ ಆತ ಪ್ರಾಮುಖ್ಯತೆ ನೀಡುತ್ತಾನೆ. ಈ ಪ್ರೇಕ್ಷಣೀಯ ಸ್ಥಳಗಳ ವಿಚಾರ ಸಾಮಾನ್ಯವಾಗಿ ಎಲ್ಲರೂ ಕೇಳಿರುವಂಥದೇ ಆಗಿರುತ್ತದೆ. ಜನಕೇಳಿಲ್ಲದ, ಸಾಮಾನ್ಯವಾಗಿ ಪರಿಚಿತವಲ್ಲದ ಬೇರೆ ಯಾವುದೇ ಜಾಗಕ್ಕೆ ಲೇಖಕ ಭೇಟಿಕೊಡುವುದಿಲ್ಲ.

---

[೧೬] ಸಂ. ಮಲ್ಲೇಪುರಂ. ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೨೮.

ವರ್ಣಿಸಲು ಹೋಗುವುದಿಲ್ಲ. ಇಂಥ ದೇಶದ ಪ್ರವಾಸ ಕಥನವಿದು ಎಂದರೆ ಓದುಗ ನಿರೀಕ್ಷಿಸಬಹುದಾದ, ಊಹಿಸಬಹುದಾದ ಕೆಲವು ವಸ್ತು, ಸ್ಥಳಗಳ ವಿವರ ಆ ಪ್ರವಾಸ ಕಥನದಲ್ಲಿರುತ್ತದೆ.

ಪ್ರವಾಸ ಕಥನದ ಲೇಖಕ ಸಂದರ್ಶಿಸಿದ ದೇಶದ ಜನರ ವಿಧಾನ, ದೃಷ್ಟಿಧೋರಣೆ, ರೀತಿ–ನೀತಿಗಳ ಬಗ್ಗೆ ತನ್ನ ಕಥನದುದ್ದಕ್ಕೂ ಹೇಳುತ್ತಾನೆ. ಆ ದೇಶದ ಜನ ಈತನನ್ನು ಸ್ವಾಗತಿಸಿದ್ದು, ಈತನೊಂದಿಗೆ ಮಾತನಾಡಿದ್ದು, ಈತನ ನೆರವಿಗೆ ಬಂದದ್ದು ಇತ್ಯಾದಿ ಸಂಗತಿಗಳ ಮೂಲಕ ಆ ಜನರ ಮನಸ್ಸು, ಜೀವನ ವಿಧಾನಗಳನ್ನು ಸೆರೆಹಿಡಿದಿರುತ್ತಾನೆ. ಅಮೆರಿಕಾದಲ್ಲಿ ಗೊರೂರರು ಲಿಫ್ಟ್‌ನಲ್ಲಿ ಹೋದಾಗ ದಾರಿತಪ್ಪಿ ಪರಿತಪಿಸುತ್ತಿದ್ದಾಗ ಒಬ್ಬ ಮಹಿಳೆ ನೆರವಿಗೆ ಬಂದುದನ್ನು ವರ್ಣಿಸುತ್ತಾರೆ.

ಒಮ್ಮೆ ಬಸ್ಸಿನಲ್ಲಿ ಪ್ರಯಾಣಿಸುವಾಗ ಇಬ್ಬರ ಜಗಳಕ್ಕೆ ಸಾಕ್ಷಿಯಾಗಿ ಕೋರ್ಟಿನ ವಾರೆಂಟು ಪಡೆಯಬೇಕಾಗಿ ಬಂದ ಘಟನೆಯನ್ನು ಅವರು ಹೇಳುತ್ತಾರೆ. ಇಂಥ ಸಂದರ್ಭಗಳಲ್ಲಿ ಅಮೆರಿಕೆಯ ಜನರ ರೀತಿ–ನೀತಿಗಳು ಪರೋಕ್ಷವಾಗಿ ಬೇರೆಯಾಗುತ್ತವೆ. ಅದೇ ಮೂರ್ತಿರಾಯರ ಪುಸ್ತಕದಲ್ಲಿ ಎರಡು ಸಂಸ್ಕೃತಿಗಳ ಮುಖಾಮುಖಿಯ ಮಾತುಗಳಲ್ಲಿ ನಡೆಯುತ್ತದೆ.

ಲೇಖಕ ತಾನು ಭೇಟಿಯಿತ್ತ ದೇಶದ ಜನರು ವಿವಿಧ ಕ್ಷೇತ್ರಗಳಲ್ಲಿ ಸಾಧಿಸಿರುವ ಸಾಧನೆ, ಪ್ರಗತಿಗಳೇನಿವೆ ಅದನ್ನು ವರ್ಣಿಸುತ್ತಾನೆ. ಅಮೇರಿಕೆಯ ಜನ ವಿಜ್ಞಾನ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಎಷ್ಟು ಮುಂದುವರಿದಿದ್ದಾರೆಂಬುದನ್ನು ಸಾಮಾನ್ಯವಾಗಿ ಎಲ್ಲ ಅಮೆರಿಕೆಯ ಪ್ರವಾಸಿಗರು ಪ್ರಸ್ತಾಪಿಸುತ್ತಾರೆ. ಇದರೊಂದಿಗೆ ಆ ಜನರ ಒಟ್ಟು ಸಂಸ್ಕೃತಿಯ ಬಗ್ಗೆ ಕೂಡ ಲೇಖಕ ಮಾತನಾಡುತ್ತಿರುತ್ತಾನೆ. ಬೇರೆ ದೇಶಗಳಿಗೆ ಭೇಟಿಯಿತ್ತವನು ಅಲ್ಲಿನ ಸಂಸ್ಕೃತಿಯನ್ನು ಕಾಣಲು, ವಿವರಿಸಲು ಪ್ರಯತ್ನಿಸುತ್ತಾನೆ. ಒಟ್ಟಿನಲ್ಲಿ ಗದ್ಯ ರೂಪ ನಿರೂಪಣಾ ಶೈಲಿ, ಆತ್ಮಕಥನದ ವೃತ್ತಾಂತ, ತಾನಿದ್ಧ ಸ್ಥಳವನ್ನು ಬಿಟ್ಟು ಬೇರೆಡೆ ಹೋಗಿ ತಾನಿದ್ದ ಸ್ಥಳಕ್ಕೆ ಬರುವವರೆಗಿನ ಅನುಭವ ಕಥನ ಈ ನಾಲ್ಕು ಪ್ರವಾಸ ಕಥನದ ಮೇಲ್ಮೈ ಲಕ್ಷಣಗಳು, ಪ್ರೇಕ್ಷಣೀಯ ಸ್ಥಳಗಳ ಬಣ್ಣನೆ, ಜನತೆಯ ಜೀವನ ವಿಧಾನದ ಸ್ಪಷ್ಟೀಕರಣ, ಭೇಟಿಯಿತ್ತ ದೇಶದ ಜನರ ಸಾಧನೆ–ಪ್ರಗತಿ, ಆ ದೇಶಕ್ಕೆ ವಿಶಿಷ್ಟವಾದ ಸಂಸ್ಕೃತಿಯ ತೋರುದರ್ಶನ ಈ ನಾಲ್ಕು ಪ್ರವಾಸ ಕಥನದ ಒಳಮೈ ಲಕ್ಷಣಗಳು.

# ಪ್ರವಾಸ ಸಾಹಿತ್ಯದ ಬಗೆಗಳು

ಪ್ರವಾಸ ಕಥನಕ್ಕೊಂದು ಸ್ಥೂಲವಾದ ಸ್ವರೂಪವಿದೆಯೆಂಬುದನ್ನು ತಿಳಿದ ನಂತರ ಪ್ರವಾಸ ಸಾಹಿತ್ಯದಲ್ಲಿ ಬಗೆಗಳೇನಾದರೂ ಇವೆಯೇ ಎಂಬುದು ಕುತೂಹಲದ ಅಂಶ. "ಪ್ರವಾಸ ಸಾಹಿತ್ಯದಲ್ಲಿ ಈ ಕೆಳಕಂಡ ಐದು ಬಗೆಗಳನ್ನು ಕಾಣಬಹುದು"[೧೭] ಎಂದು ಸಾ.ಶಿ. ಮರುಳಯ್ಯನರು ಹೇಳುತ್ತಾರೆ.

೧. ತೀರ್ಥಯಾತ್ರಾ ಪ್ರವಾಸ ಸಾಹಿತ್ಯ
೨. ಸಾಂಸ್ಕೃತಿಕ ಪ್ರವಾಸ ಸಾಹಿತ್ಯ
೩. ಶೈಕ್ಷಣಿಕ ಪ್ರವಾಸ ಸಾಹಿತ್ಯ
೪. ವ್ಯವಹಾರಿಕ ಪ್ರವಾಸ ಸಾಹಿತ್ಯ
೫. ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ

ಈ ವರ್ಗೀಕರಣ ಪ್ರವಾಸಿಗ ಯಾವ ಉದ್ದೇಶವನ್ನಿಟ್ಟುಕೊಂಡು ಪ್ರವಾಸ ಮಾಡಿ ಪುಸ್ತಕ ಬರೆದಿದ್ದಾನೆ ಎಂಬುದನ್ನು ಆಧರಿಸಿದೆ. ಆದರೆ ಇದೊಂದು ಖಚಿತ ವರ್ಗೀಕರಣವಲ್ಲ. ವ್ಯಾವಹಾರಿಕ ದೃಷ್ಟಿಯನ್ನಿಟ್ಟುಕೊಂಡು ಪ್ರವಾಸ ಮಾಡಿದ ಲೇಖಕ ತನ್ನ ಕೃತಿಯಲ್ಲಿ ಸಂಸ್ಕೃತಿ, ಶಿಕ್ಷಣ, ವಿಚಾರಗಳನ್ನು ಕುರಿತು ಪ್ರಸ್ತಾಪಿಸಬಾರದೆಂದೇನೂ ಇಲ್ಲ. ಪ್ರವಾಸ ಪ್ರೇಮಿಯ ಪ್ರವಾಸ ಸಾಹಿತ್ಯದಲ್ಲಿ ತೀರ್ಥಕ್ಷೇತ್ರ, ಶೈಕ್ಷಣಿಕ ಕೇಂದ್ರ, ಸಂಸ್ಕೃತಿಗಳ ವಿಷಯ ಬಂದೇ ಬರುತ್ತದೆ. ಹೀಗಾಗಿ ಪ್ರವಾಸ ಸಾಹಿತ್ಯದ ಒಂದು ವಿಭಾಗದ ಪುಸ್ತಕ ಮತ್ತೊಂದು ವಿಭಾಗಕ್ಕೆ ಬರುವುದನ್ನು ಈ ವರ್ಗೀಕರಣದಲ್ಲಿ ತಪ್ಪಿಸಲಾಗುವುದಿಲ್ಲ ಎಂದು ಡಾ.ಎನ್.ಎಸ್. ತಾರಾನಾಥ್‌ರವರು ಅಭಿಪ್ರಾಯ ಪಡುತ್ತಾರೆ. ವರದರಾಜ ಹುಯಿಲಗೋಳರು ಪ್ರವಾಸ ಸಾಹಿತ್ಯದ ರೂಪವನ್ನು ಆಧರಿಸಿ;

೧. ಪತ್ರರೂಪ ಪ್ರವಾಸ ಸಾಹಿತ್ಯ
೨. ದಿನಚರಿ ಪ್ರವಾಸ ಸಾಹಿತ್ಯ
೩. ಕಥಾರೂಪ ಪ್ರವಾಸ ಸಾಹಿತ್ಯ

ಎಂಬ ಮೂರು ಬಗೆಗಳನ್ನು ಗುರುತಿಸಿದ್ದಾರೆ.[೧೮]

---

[೧೭] ಸಂ. ಮಲ್ಲೇಪುರಂ, ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ. ಪು. ೩೦.
[೧೮] ಸಂ. ಮಲ್ಲೇಪುರಂ, ಜಿ. ವೆಂಕಟೇಶ, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೩೦.

ಹೀಗೆ ಪ್ರವಾಸಿ ಸಾಹಿತ್ಯದ ಬಗೆಗಳನ್ನು ಒಬ್ಬೊಬ್ಬ ಲೇಖಕ ಒಂದೊಂದು ತೆರನಾಗಿ ವಿಂಗಡಿಸುತ್ತಾರೆ. ಇದನ್ನು ವ್ಯಾಪಕವಾದದ್ದು, ಖಚಿತವಾದದ್ದು ಎನ್ನಲಾಗದು. ಇದಕ್ಕಿಂತ ಹೆಚ್ಚಾಗಿ ಪ್ರವಾಸ ಸಾಹಿತ್ಯವೇ ಒಂದು ಸಾಹಿತ್ಯ ಪ್ರಕಾರ. ಅದನ್ನು ಪತ್ರ (Epistle) ಮತ್ತು ದಿನಚರಿ (Dairy)ಗಳೆಂಬ ಇನ್ನೆರಡು ಪ್ರಕಾರಗಳೊಂದಿಗೆ ಬೆರೆಸಿ ಮಾಡುವ ವಿಭಾಗ ಸೂಕ್ತವೆನಿಸುವುದಿಲ್ಲ. ಅಲ್ಲದೆ ವರ್ಗೀಕರಣದಲ್ಲಿ ಮೊದಲೆರಡು ಗುಂಪುಗಳಿಗೆ ಸಂಬಂಧಿಸಿದಂತೆ ಬಂದಿರುವ ಪುಸ್ತಕಗಳ ಸಂಖ್ಯೆ ಕಡಿಮೆಯೇ. ಮೂರನೆಯ ಗುಂಪಿನದೇ ಸಿಂಹಪಾಲು. ಪುಸ್ತಕದ ವಸ್ತು, ಲೇಖಕನ ದೃಷ್ಟಿಧೋರಣೆ ಹಾಗೂ ಈ ಬಗೆಯ ಸಾಹಿತ್ಯದ ವ್ಯಾಪಕತೆಯನ್ನು ಇದು ಸಮಗ್ರವಾಗಿ ಒಳಗೊಳ್ಳುವುದಿಲ್ಲ.

ಪ್ರವಾಸ ಸಾಹಿತ್ಯದಲ್ಲಿ ಅನೇಕ ಭೇದಗಳನ್ನು ಕಾಣಬಹುದಾಗಿದೆ. ಒಂದೊಂದು ಪ್ರವಾಸ ಕಥನದ ಕೃತಿಯನ್ನು ಒಂದೊಂದು ಗುಂಪಿಗೆ ಸೇರಿಸಬೇಕಾಗುತ್ತದೆ. ಒಂದೊಂದು ಕೃತಿಯಲ್ಲಿ ಒಂದೊಂದು ಕ್ಷೇತ್ರ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಲೇಖಕನ ದೃಷ್ಟಿಧೋರಣೆಯಂತೆ ಈ ಕ್ಷೇತ್ರಗಳ ಬಗ್ಗೆ ಕೃತಿಯಲ್ಲಿ ಹೆಚ್ಚಿನದಾಗಿ ವಿವರಿಸುತ್ತಾರೆ. ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ಬಂದಿರುವ ಪ್ರವಾಸ ಸಾಹಿತ್ಯದಲ್ಲಿ ಈ ಕೆಳಕಂಡ ಬಗೆಗಳನ್ನು ಪ್ರವಾಸ ಸಾಹಿತ್ಯದಲ್ಲಿ ಗುರುತಿಸಬಹುದು.

೧. ಮಾಹಿತಿ ಕಥನ ಪ್ರವಾಸ ಸಾಹಿತ್ಯ (Factual account travelogues)

೨. ತೋರು ವಾಸ್ತವತೆಯ ಭ್ರಾಮಿಕ ಪ್ರವಾಸ ಸಾಹಿತ್ಯ (Fantasy purporting to be fact travelogues)

೩. ನಿರ್ಧಿಷ್ಟವಾದ ಉದ್ದೇಶವನ್ನು ಇಟ್ಟುಕೊಂಡು ಪ್ರವಾಸ ಮಾಡಿ ತಮ್ಮ ಅನುಭವಗಳನ್ನು ವರದಿಯಾಗಿಸದೆ ಸಾಹಿತ್ಯವಾಗಿಸುವ ಪ್ರವಾಸ ಸಾಹಿತ್ಯ (Travel Literature with a definite purpsoe)

ಎಂದು ವಿಭಾಗಿಸುತ್ತಾ, ಮಾಹಿತಿ ಕಥನ ಪ್ರವಾಸ ಸಾಹಿತ್ಯದಲ್ಲಿ ಫಾಹಿಯಾನ, ಹುಯನ್‌ತ್ಸಾಂಗ್, ಇತ್ಸಿಂಗ್, ಅಬ್ದುಲ್ ರಜಾಕ್, ಡೆಮಿಂಗೊ ಪಾಯಸ್ ಈ ಮುಂತಾದ ವಿದೇಶಿ ಯಾತ್ರಿಕರು ಭಾರತವೇ ಮುಂತಾದ ದೇಶಗಳನ್ನು ನೋಡಿ ಅಲ್ಲಿ ತಾವು ಕಂಡುಂಡದನ್ನು

ಬಣ್ಣಿಸಿದ್ದಾರೆ. ವಿಜಯನಗರಕ್ಕೆ ಭೇಟಿಯಿತ್ತ ರಜಾಕ್, ಪಾಯಸ್, ಬಾರ್ಬೋಸ್ ಮುಂತಾದವರು ವಿಜಯನಗರದ ಆ ಕಾಲದ ವಿವರಗಳನ್ನು ತಮ್ಮ ಬರಹಗಳಲ್ಲಿ ಕೊಡುತ್ತಾರೆ. ಇವೂ ಪ್ರವಾಸ ಸಾಹಿತ್ಯದ ವಿವರಗಳೇ. ಈ ಪ್ರವಾಸ ಸಾಹಿತ್ಯದಲ್ಲಿ ಲೇಖಕನ ಅನುಭವ ಅಪರಿಚಿತತೆಯೊಂದಿಗಿನ ಒಡನಾಟಗಳಿಗಿಂತ ತಾವು ಕಂಡ ದೇಶದ ಬಗೆಗಿನ ಮಾಹಿತಿಗೆ ಪ್ರಾಮುಖ್ಯತೆ ಹೆಚ್ಚು. ಇಲ್ಲಿ ಲೇಖಕ ಸಾಹಿತಿಯಾಗುವುದಕ್ಕಿಂತ ಚರಿತ್ರೆಕಾರನಾಗುತ್ತಾನೆ. ಆತ ನೀಡುವ ವಿವರಗಳು ಪ್ರಮಾಣಿಕ ವರದಿಗಳಾದ್ದರಿಂದಲೇ ಅವನು ಇತಿಹಾಸದ ಪುನರ್ ರಚನೆಯ ಒಂದು ಆಧಾರವಾಗಿ ಚರಿತ್ರೆಕಾರರು ಬಳಸಿಕೊಳ್ಳುತ್ತಾರೆ. ಇಲ್ಲಿ ನಿರೂಪಣೆಯಲ್ಲಿ ಸರಳತೆ ಹಾಗೂ ನೇರಗುಣ ಪ್ರದರ್ಶಿಸಿದ್ದಾರೆ. ಅವರ ವಿವರಗಳು ಮಾಹಿತಿಯಿಂದ ಇಡಿಕರಿದಿರುತ್ತವೆಯೇ ವಿನಹ ಸಾಹಿತ್ಯದ ಸೊಗಸಿನ ಸ್ಪರ್ಶ ಪಡೆದಿರುವುದಿಲ್ಲ. ತಮ್ಮ ದೇಶದವರಿಗೆ ಕುತೂಹಲಕರವಾದ ಅಗತ್ಯವಾದ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ವಿಚಾರಗಳನ್ನು ಮಾತ್ರ ಅವರು ಪ್ರಸ್ತಾಪಿಸುತ್ತಾರೆ. ಪ್ರೇಕ್ಷಣೀಯ ಸ್ಥಳಗಳ ವರ್ಣನೆಯಾಗಲಿ, ಬೆಟ್ಟ, ಪರ್ವತ, ಕಾಡು, ದೇವಸ್ಥಾನಗಳ ವಿವರಗಳನ್ನಾಗಲಿ ಅವರು ಸಾಹಿತ್ಯ ಪರಿಭಾಷೆಯಲ್ಲಿ ನಿರೂಪಿಸುವುದಿಲ್ಲ.

ತೋರು ವಾಸ್ತವತೆಯ ಭ್ರಾಮಿಕ ಪ್ರವಾಸ ಸಾಹಿತ್ಯ (Fantasy Purponting to be fact travelogues): ಈ ಬಗೆಯ ಸಾಹಿತ್ಯ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಲಿತದಲ್ಲಿದೆ. ಹೆರಡೋಟಸ್ ಮುಂತಾದ ಕೆಲವು ವ್ಯಕ್ತಿಗಳು ಭೂಮಿ ಗುಂಡಾಗಿದೆ, ಭೂಮಂಡಲದ ಬೇರೆ ಬೇರೆ ಪ್ರದೇಶಗಳಲ್ಲಿ ಜನ ಹೀಗಿದ್ದಾರೆ, ಈ ರೀತಿ ಬದುಕುತ್ತಿದ್ದಾರೆ ಇತ್ಯಾದಿ ಸಂಗತಿಗಳನ್ನು ಹೇಳಿದ್ದಾರೆ. ಆದರೆ ಇಲ್ಲಿನ ವಿವರಗಳು ಶುದ್ಧ ಕಾಲ್ಪನಿಕ ಇದನ್ನು ನೈಜವಾದ ಪ್ರವಾಸ ಕಥನವೆಂದು ಭಾವಿಸಿ ಅನೇಕ ವಿಮರ್ಶಕರು ವಿಶ್ಲೇಷಿಸಿದ್ದರು. ಆದರೆ ಇದೊಂದು ಕಾಲ್ಪನಿಕ ಪ್ರವಾಸ ಕಥನವೆನ್ನುವುದು ತಿಳಿದು ಬಂದಿತು.

ನಿರ್ಧಿಷ್ಟವಾದ ಉದ್ದೇಶವನ್ನು ಇಟ್ಟುಕೊಂಡು ಪ್ರವಾಸ ಮಾಡಿ. ತಮ್ಮ ಅನುಭವಗಳನ್ನು ವರದಿಯಾಗಿಸದೆ ಸಾಹಿತ್ಯವಾಗಿಸುವ ಪ್ರವಾಸ ಸಾಹಿತ್ಯ (Travel Literature with a definite purpose). ಈ ಬಗೆಯ ಕೃತಿಗಳೇ ಎಲ್ಲಾ ಭಾಷೆಗಳಲ್ಲೂ ಹೆಚ್ಚು ಇಂಥ ಪ್ರವಾಸಗಳಲ್ಲಿ ಮುಖ್ಯವಾದ ಸಂಗತಿಗಲು ಎರಡು. ೧. ಅವಧಿ ೨. ಉದ್ದೇಶ. ಪ್ರವಾಸ ವಿದೇಶದಲ್ಲಿ ಶೈಕ್ಷಣಿಕ ತರಬೇತಿ, ವೈದ್ಯಕೀಯ ಚಿಕಿತ್ಸೆ, ಕ್ರೀಡಾಕೂಟಗಳಲ್ಲಿ ಪಾಲ್ಗೊಳ್ಳಲೆಂದೋ ಹೋಗಬಹುದು. ಈ ನಿರ್ಧಿಷ್ಟವಾದ ಉದ್ದೇಶಗಳು. ನಿರ್ಧಿಷ್ಟ ವ್ಯಕ್ತಿಯ ಮನಸ್ಸು ಕೆಲಸಗಳನ್ನು ನಿಯಂತ್ರಿಸುತ್ತವೆ.

ಉದ್ದೇಶಗಳು ಬದಲಾದಂತೆಲ್ಲ ಪ್ರವಾಸ ಕಥನಗಳ ದನಿ ಮತ್ತು ದೃಷ್ಟಿ ಧೋರಣೆಗಳೂ ಬದಲಾಗಬಹುದು. ನಿರ್ಧಿಷ್ಟೋದ್ದೇಶ ಪ್ರವಾಸ ಕಥನಗಳಲ್ಲಿ ಪ್ರವಾಸಿ ಇತಿಹಾಸಕಾರನೇ, ಸಮಾಜಶಾಸ್ತ್ರಜ್ಞನೇ, ಸಾಹಿತಿಯೇ, ವಿಜ್ಞಾನಿಯೇ, ಲಲಿತಕಲಾಕಾರನೇ ಎಂಬುದನ್ನು ಅವಲಂಬಿಸಿ ಕೃತಿಯ ದನಿ ಮುಖ್ಯ ಪ್ರವಾಹಗಳು ರೂಪುಗೊಳ್ಳುತ್ತವೆ. ಒಟ್ಟಿನಲ್ಲಿ ಪ್ರವಾಸ ಕಥನದಲ್ಲಿ ಇತಿಹಾಸ, ಭೂಗೋಳ, ಸಮಾಜ, ಸಂಸ್ಕೃತಿ, ರಾಜಕೀಯ, ಸಾಹಿತ್ಯ, ಲಲಿತಕಲೆ, ವಿಜ್ಞಾನಗಳೆಲ್ಲ ಬೆರೆತು ಬರಲು ಸಾಕಷ್ಟು ಅವಕಾಶಗಳಿವೆ.

ಪ್ರವಾಸ ಕಥನಗಳು ಸಾಮಾನ್ಯವಾಗಿ ಗದ್ಯರೂಪದ, ನಿರೂಪಣಾ ಶೈಲಿಯಲ್ಲಿ ಇರುತ್ತವೆ. ಲೇಖಕ ತಾನು ಪ್ರವಾಸ ಮಾಡಿದ ದೇಶಗಳಲ್ಲಿ ಕಂಡ ದೃಶ್ಯ, ಪ್ರದೇಶ, ತನಗಾದ ಅನುಭವಗಳನ್ನು ತನ್ನ ಸೃಜನಶೀಲ ಪ್ರತಿಭೆಯ ಮೂಲಕ ವರ್ಣನೆ, ವಸ್ತು ವಿಶ್ಲೇಷಣೆ, ಅಲ್ಲಿನ ಸಂಪ್ರದಾಯಗಳನ್ನು ಹೇಳುತ್ತಾ ಹೋಗುತ್ತಾನೆ. ಓದುಗರಿಗೆ ಪ್ರವಾಸ ಕೈಗೊಂಡ ಅನುಭವವನ್ನು ಮಾಡಿಸುತ್ತಾನೆ. ವಿ.ಕೃ. ಗೋಕಾಕರವರು ಅಭಿಪ್ರಾಯಪಡುವಂತೆ "ಪ್ರವಾಸ ಸಾಹಿತ್ಯವು ಕಾವ್ಯಾವಾದಾಗ ಅದರಲ್ಲಿ ಆವೇಶ ತುಂಬಿ, ಭಾವ ಇಲ್ಲದೆ ದರ್ಶನದ ಪ್ರಾಧಾನ್ಯ ಅಲ್ಲಿ ಸಂಭವಿಸುವುದುಂಟು. ಪ್ರವಾಸ ಸಾಹಿತ್ಯವು ಗದ್ಯವಾದಾಗ ವ್ಯಕ್ತಿಗಳ ಸ್ನೇಹವರ್ತುಲ, ಕಂಡ ದೇಶದ ಸಾಮಾಜಿಕ ಹಾಗೂ ನೈತಿಕ ಪರಿಸ್ಥಿತಿ, ವ್ಯಕ್ತಿ–ವ್ಯಕ್ತಿಗಳ ಸಂದರ್ಶನದಲ್ಲಾದ ಚಮತ್ಕಾರ ಇಲ್ಲವೆ ಮೋಜಿನ ಪ್ರಸಂಗಗಳು ಇವೆಲ್ಲದರ ಕಡೆಗೆ ನನ್ನ ಲಕ್ಷ್ಯ ಹರಿದು ಹೋಗುತ್ತದೆ. ನನ್ನೊಳಗಿನ ಬುದ್ಧಿ ಜೀವಿ ಅಲ್ಲಿ ಬಂದು ತನ್ನ ದರ್ಶನಗಳನ್ನು ನೆನೆಸಿಕೊಂಡು ಆ ಆರ್ಥಿಕರಣದ ವಿಧಾನವನ್ನು ಈ ಉಳಿದ ಪ್ರಸಂಗಗಳಿಗೆ ಅನ್ವಯಿಸುತ್ತಾನೆ." ಕನ್ನಡದ ಕವಿ/ಕಾದಂಬರಿಕಾರ, ಕಥೆಗಾರ, ನಾಟಕಕಾರನೇ ಆಗಿರಲಿ ಅವನು ನೋಡಿದ ಪ್ರದೇಶವೊಂದರ ಪ್ರತ್ಯಕ್ಷಾನುಭವವನ್ನು ನಿರೂಪಿಸುವಾಗ ಅವನ ಸೃಜನಶೀಲ ಪ್ರತಿಭೆ ಪ್ರವಾಸ ಸಾಹಿತ್ಯವೊಂದನ್ನು ಬರೆಯುವಾಗ ಏಕೆ ಕ್ರಿಯಾತ್ಮಕವಾಗಿ ವ್ಯವಹರಿಸುವುದಿಲ್ಲ? ಕಾರಂತ, ಗೋಕಾಕ, ವಿ.ಸೀ. ದೇಜಗೌ, ಶಿವರುದ್ರಪ್ಪ, ಪ್ರಭುಶಂಕರ್, ಎ.ಎನ್.ಮೂರ್ತಿರಾವ್, ಗೊರೂರು, ವ್ಯಾಸರಾಯ ಬಲ್ಲಾಳ, ನಾಗತಿಹಳ್ಳಿ ಚಂದ್ರಶೇಖರ, ಕು.ಶಿ.ಹರಿದಾಸಭಟ್ಟ, ಇವರೇ ಮೊದಲಾದವರ ಪ್ರವಾಸ ಕಥನ ಓದಿದಾಗ ಅಲ್ಲಿ ಸೃಜನ ಪ್ರತಿಭೆ ವ್ಯಕ್ತವಾಗಿಲ್ಲ. ಪ್ರಾತ್ಯಕ್ಷಿಕ ಅನುಭವ ನಿವೇದನೆ ಮಾತ್ರ ಎನ್ನುವುದಾದರೆ. ಅದಕ್ಕಿಂತ ಅಪಾಯಕಾರಿ ಹೇಳಿಕೆ ಮತ್ತೊಂದಿಲ್ಲ. ಇಲ್ಲಿ ಲೇಖಕನ ಕೃತಿಗಳಲ್ಲಿ ಅವರು ಕಂಡ ನೂತನ ಅನುಭವಗಳ ವಸ್ತು ವಿವೇಚನೆ, ಚಿಂತನೆಗಳು, ಸಾಮಾಜಿಕ ವಿಚಾರಗಳು ಅವರ ಸೃಜನಶೀಲ ಪ್ರತಿಭೆಯ ಮೂಲಕ ಹೊರ ಹೊಮ್ಮುತ್ತದೆ. ಸೃಜನಶೀಲತೆ ಹೊರಬರದೆ ಯಾವುದೇ ಲೇಖಕ ಓದುಗನಿಗೆ ಮುದ ನೀಡುವ ಸಾಹಿತ್ಯವನ್ನು

ರಚಿಸಲಾಗುವುದಿಲ್ಲ. ಪ್ರವಾಸ ಸಾಹಿತ್ಯದ ರಚನಾಕಾರನು ಕೂಡ ತನ್ನ ಪಾಂಡಿತ್ಯ, ಪ್ರತಿಭೆಯ ಮೂಲಕವೇ ಕೃತಿಯನ್ನು ರಚಿಸುತ್ತಾನೆ. ಇಲ್ಲದಿದ್ದರೆ ಅದು ನೆಪ ಮಾತ್ರಕ್ಕೆ ಬರೆದ ಕೃತಿಯಾಗಿ ಓದುಗರನ್ನು ತಲುಪದೆ ಹೋಗುತ್ತದೆ.

ಪ್ರವಾಸ ಕಥನ ಸಾಹಿತ್ಯ ಕೃತಿಗಳು, ಗದ್ಯ ನಿರೂಪಣೆ, ಪತ್ರರೂಪದ ಪ್ರವಾಸ ಸಾಹಿತ್ಯ, ದಿನಚರಿರೂಪದ ಪ್ರವಾಸ ಸಾಹಿತ್ಯಗಳೆಂಬ ಬಗೆಗಳಿವೆ. ದಿನಚರಿರೂಪದ ಪ್ರವಾಸ ಸಾಹಿತ್ಯವನ್ನು ಕನ್ನಡದಲ್ಲಿ ಮೊದಲ ಬಾರಿಗೆ ರಚಿಸಿದರವರು ವಿ.ಕೃ.ಗೋಕಾಕರು. ಇವರು ೧೯೩೬ರಲ್ಲಿ ಪ್ರಕಟವಾದ ಅವರ 'ಸಮುದ್ರದಾಚೆಯಿಂದ' ದಿನಚರಿ ಹಾಗೂ ಪತ್ರರೂಪದ ಪ್ರವಾಸ ಸಾಹಿತ್ಯ ನೆಲಸಿದ ಜಾಗದಲ್ಲಿ ಅನುಭವಗಳನ್ನು ಕರಗಲು ಎಡೆಗೊಡದೆ ಅಂದಂದೇ ಬರೆದಿರುವ ಕ್ರಮವಿದು. ಇದು "ಸ್ಥಿರ ಮುಹೂರ್ತದಲ್ಲಿ ರಚಿತವಾದ ಕೃತಿ" ಎಂದು ಗೋಕಾಕರೇ ತಿಳಿಸಿದ್ದಾರೆ. ದಿನಚರಿ ರೂಪದ ಪ್ರವಾಸ ಕಥನದಲ್ಲಿ ಸೂಕ್ಷ್ಮವಾದ ವಿವರಗಳು ಮತ್ತು ಅಗತ್ಯವಾದ ವಾದವೂ ಇರುತ್ತದೆ. ಇಲ್ಲಿ ಅವರ ದಿನಚರಿಯಲ್ಲಿ ಕಂಡು ಬರುವ ಎಲ್ಲಾ ಸಂಗತಿಗಳು ದಾಖಲಾಗುತ್ತವೆ. ಈ ರೂಪದ ಸಾಹಿತ್ಯದಲ್ಲಿ ಅನಗತ್ಯವಾದ ವಿಚಾರಗಳನ್ನು ಕೂಡ ಒಳಗೊಂಡಿರುತ್ತದೆ. ಇದು ಓದುಗನಿಗೆ ಅವಶ್ಯಕವಿರುವುದಿಲ್ಲ. ದಿನಚರಿ ರೂಪದಲ್ಲಿರುವ ಸಾಹಿತ್ಯದಲ್ಲಿ ಉಚಿತ ಸಮವಾಯ ವಿವೇಕ ಮರೆಯಾಗುವುದು ಸಹಜವಾಗಿಯೇ ಇದೆ. ತೀ.ನಂ.ಶ್ರೀಯವರ 'ನೆಂಟರು' ಸಂಕಲನದಲ್ಲಿ ಸೇರಿರುವ "ಪ್ರವಾಸಿಯ ಪತ್ರ – ದಿನಚರಿಗಳಿಂದ" ಎಂಬ ಲೇಖನವಾದರೂ ಇದೇ ಬಗೆಯದು. ದಿನಚರಿ ಗುರುತುಗಳನ್ನು ಆಧರಿಸಿ ರೂಪಗೊಂಡದ್ದು ಅಲ್ಲಿರುವ ಒಂದೆರಡು ಚಿಟ್ಟೆ ಕತೆಗಳು (Ancedoter) ಗಮನಾರ್ಹವಾದವು.[೧೯]

ಪತ್ರರೂಪದ ಪ್ರವಾಸ ಸಾಹಿತ್ಯದಲ್ಲಿ ಅನೇಕ ಲೇಖಕರು ರಚಿಸಿದ್ದಾರೆ. ತಾವು ಪ್ರವಾಸ ಹೋದ ದೇಶದಿಂದ ಅಲ್ಲಿ ಕಂಡ ದೃಶ್ಯಗಳು, ಅಲ್ಲಿನ ಜನರ ಒಡನಾಟ, ಅಲ್ಲಿಯ ಆಚಾರ–ವಿಚಾರಗಳನ್ನು, ತಮಗಾದ ಅನುಭವಗಳನ್ನು ಪತ್ರರೂಪದಲ್ಲಿ ತಮ್ಮ ಬಂಧು–ಬಳಗದವರಿಗೆ ಬರೆಯುತ್ತಾರೆ. ಈ ರೀತಿಯ ಪತ್ರರೂಪದ ಪ್ರವಾಸ ಸಾಹಿತ್ಯ ಕನ್ನಡದಲ್ಲಿ ಎಸ್.ಎ. ಕೃಷ್ಣಮೂರ್ತಿರಾಯರ 'ದಿಲ್ಲಿಯ ಪತ್ರಗಳು', ಕೋ. ಚೆನ್ನಬಸಪ್ಪನವರ 'ದಕ್ಷಿಣೇಶ್ವರನ ದರ್ಶನ', ವಿ.ಸಾ.ರವರ 'ಯಾತ್ರಿಕನ ಪತ್ರಗಳು, ಎಚ್.ಜಿ. ಜೋಶಿಯವರ 'ಶಿಲಾ ಹೃದಯ', ನವರತ್ನರಾಂ ರವರ 'ಪ್ಯಾರಿಸ್ಸಿನಿಂದ ಪ್ರೇಯಸಿಗೆ' ಮುಂತಾದ ಕೃತಿಗಳನ್ನು ಕಾಣಬಹುದು. ಈ ಪತ್ರರೂಪದ

---

[೧೯] ಸಂ. ಮಲ್ಲೇಪುರಂ, ಜಿ. ವೆಂಕಟೇಶ್, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೩೭.

ಪ್ರವಾಸದಲ್ಲಿ ಪತ್ರವನ್ನು ಲೇಖಕರು ಯಾರಿಗೆ ಬರೆಯುತ್ತಿದ್ದಾರೆ. ಎಂಬುದರ ಮೇಲೆ ಪತ್ರಗಳು ಗಂಭೀರತೆ, ಹಾಸ್ಯಪ್ರಜ್ಞೆ, ಸರಸ–ಸಂಭಾಷಣೆಗಳು ಕಂಡುಬರುತ್ತವೆ. ಈ ದೃಷ್ಟಿಯಿಂದ ಪ್ರವಾಸ ಸಾಹಿತ್ಯ ಒಂದು ಸಂಕೀರ್ಣ ಸಾಹಿತ್ಯ ಪ್ರಕಾರವಾಗಿ ನಿಲ್ಲುತ್ತದೆ. ಅದರಲ್ಲಿ ನಿರೂಪಣಗದ್ಯ, ಪತ್ರ, ದಿನಚರಿ ಬೆರೆತು ಬರಲು ಅವಕಾಶವಿದೆ.

ಪ್ರವಾಸ ಸಾಹಿತ್ಯ ಇಷ್ಟೇ ರೂಪದಲ್ಲಿ ಅಲ್ಲದೆ ಕಾವ್ಯರೂಪದಲ್ಲಿಯೂ ಕೂಡ ಪ್ರವಾಸದ ಅನುಭವಗಳನ್ನು ಹೇಳಿದ್ದಾರೆ. ವಿ.ಕೃ.ಗೋಕಾಕರ "ಪ್ರವಾಸ ಸಾಹಿತ್ಯ" ಎಂಬ ಸಂಪುಟದಲ್ಲಿ "ಸಮುದ್ರಾಚೆಯಿಂದ" ಮತ್ತಿತರ ಕೃತಿಗಳನ್ನು ಜೋಡಿಸಿದ ಮೇಲೆ 'ಪುಣ್ಯ ಭೂಮಿ' , 'ಸಿಮ್ಲಾ ಸಿಂಪೋನಿ' ಎಂಬ ತಮ್ಮ ಎರಡು ಕವನ ಸಂಕಲನಗಳನ್ನು ಸೇರಿಸಿದ್ದಾರೆ. ಇವುಗಳನ್ನು ಪ್ರವಾಸ ಸಾಹಿತ್ಯ ಎಂದು ಒಪ್ಪಲಾಗುವುದಿಲ್ಲ. ಎಂದು ಎನ್.ಎಸ್. ತಾರಾನಾಥರು ಅಭಿಪ್ರಾಯ ಪಡುತ್ತಾರೆ. ಪ್ರವಾಸದ ಕಥಾಂಶವಾಗಲಿ, ಪ್ರವಾಸಾನುಭವವಾಗಲಿ, ಇರದ ಇದನ್ನು ಪ್ರವಾಸ ಸಾಹಿತ್ಯ ಎಂದು ಖಂಡಿತವಾಗಿ ಪರಿಗಣಿಸಲಾಗುವುದಿಲ್ಲ ವಸ್ತು ವೈವಿಧ್ಯವಾಗಲಿ, ಕಥನ ಶರೀರವಾಗಲಿ ಇವುಗಳಿಲ್ಲಿಲ್ಲ. ಭಾವಗೀತೆಯಂತಿರುವ ಪದ್ಯ ಖಂಡಗಳು ಇವು. ಇವನ್ನು ಪ್ರವಾಸ ಕಥನದ ಒಂದು ಭೇದವೆಂದು ಹೇಗೆ ಪರಿಗಣಿಸುವುದು? ಗೋಕಾಕರು ತಮ್ಮ ಸಾಹಿತ್ಯವನ್ನು ಒಂದೆಡೆ ತರುವ ಉದ್ದೇಶದಲ್ಲಿ ಇವನ್ನು ತಮ್ಮ ಅನುಕೂಲ ದೃಷ್ಟಿಯಿಂದ ಸೇರಿಸಿದ್ದಾರೆ. ಅಷ್ಟೇ ಆದ್ದರಿಂದ ಇಂಥ "ಕ್ಷೇತ್ರ ಕವಿತೆ"ಗಳನ್ನು ಪ್ರವಾಸ ಸಾಹಿತ್ಯದಲ್ಲಿ ಸೇರಿಸಬಾರದು.

ಕಾದಂಬರಿ ರೂಪದಲ್ಲಿ ಕೂಡ ಪ್ರವಾಸ ಸಾಹಿತ್ಯ ರಚಿತವಾಗಿದೆ. ಶಿವರಾಮ ಕಾರಂತರ 'ಆಳ ನಿರಾಳ' ನಿಸ್ಸಂಶಯವಾಗಿ ಸಾಮಾಜಿಕ ಕಾದಂಬರಿ. ಅಲ್ಲಿ ಗಟ್ಟಿಯಾದ ಒಂದು ಕಥೆಯಿದೆ. ಕಥೆಗೆ ಸಂಬಂಧಿಸಿದಂತೆ ಪಾತ್ರಗಳಿವೆ. ಕಾರಂತರು ಪ್ರವಾಸ ಪ್ರಿಯರಾದ್ದರಿಂದ ಕಾದಂಬರಿಗೆ ತಮ್ಮ ಪ್ರವಾಸ ಕಥನವನ್ನು ಹೊಂದಿಸಿರುವರು. ಉತ್ತರ ಭಾರತ ಪ್ರವಾಸ ಕೈಗೊಂಡ ಯಾತ್ರಿಕರ ಭಿನ್ನ ವ್ಯಕ್ತಿತ್ವಗಳ ಸಮಾವೇಶ ಆ ಕಾದಂಬರಿಯಲ್ಲಾಗಿದೆ. ಕಾರಂತರ ಪ್ರತಿನಿಧಿಯಾಗಿ ಕಲಾವಿದ ದೇಸಾಯಿ ಕಾದಂಬರಿಯಲ್ಲಿ ತನ್ನ ವೈಚಾರಿಕ ಪ್ರಜ್ಞೆಯನ್ನು ಕಾದಂಬರಿಯ ಉದ್ದಕ್ಕೂ ಪ್ರಕಟಪಡಿಸುವನು. ಕನ್ನಡದಲ್ಲಿ ಕಾದಂಬರಿ ಮಾಧ್ಯಮದಲ್ಲಿ ಪ್ರವಾಸ ಸಾಹಿತ್ಯಕ್ಕೆ ಒಂದು ಅಪರೂಪದ ಕೊಡುಗೆಯಾಗಿ ಕಾರಂತರು ತಮ್ಮ 'ಆಳ ನಿರಾಳ' ವನ್ನು ಕೊಟ್ಟಿರುವರು. ಇದು ಕಾದಂಬರಿ ರೂಪದ ಮೊದಲ ಕನ್ನಡ ಪ್ರವಾಸ ಸಾಹಿತ್ಯವಾಗಿದೆ.

ದೇಜಗೌರವರ 'ವಿಸ್ಮಯಗಳ ನಾಡಿನಲ್ಲಿ' ಅಮೆರಿಕಾದ ಪ್ರವಾಸ ಕಥನದಲ್ಲಿ ದೇಜಗೌರವರು ಕಾದಂಬರಿಯ ತಂತ್ರವನ್ನು ಬಳಸಿದ್ದಾರೆ. "ವಸ್ತು ಸ್ಥಿತಿಯ ನೈಜ ಚಿತ್ರಣಕ್ಕೆ ಉತ್ತಮ ಪುರುಷಕ್ಕಿಂತ ಪ್ರಥಮ ಪುರುಷದ ಬಳಕೆಯೇ ಮೇಲೆಂದು ಕಥನಕಾರ ಸಾಕ್ಷೀಭೂತವಾಗುಳಿಯುವುದೆ ಸರಿಯೆಂದು ನನಗನ್ನಿಸಿದ್ದರಿಂದ ಇಡೀ ಕಥೆಯನ್ನು ಪ್ರಥಮ ಪುರುಷಾರ್ಥದಲ್ಲಿ ಬಳಸಲಾಗಿದೆ. ಪ್ರಥಮ ಪುರುಷದಲ್ಲಿ ಕಥನಿಸುವಾಗ ಕಥನಕಾರನಿಗೆ ಹೆಚ್ಚು ಸ್ವಾತಂತ್ರ್ಯವಿದೆಯಂದೇ ನನ್ನ ನಂಬಿಕೆ. ಇತರರ ಮಟ್ಟಿಗೆ ಈ ನಂಬಿಕೆ ಎಷ್ಟು ನಿಜವೋ ಕಾಣೆ. ಅದೇನೇ ಇರಲಿ, ಹಳೆಯ ಜಾಡನ್ನು ಬಿಟ್ಟು, ವಿನೂತನ ವಿಧಾನವನ್ನವಲಂಬಿಸಿದ್ದರಿಂದ ನನಗಂತೂ ಹಳೆಯ ಸುಂಕು ಮುರಿದ ಸಮಾಧಾನವಿದೆ. ಇದು ಓದುಗರಿಗೆ ಈಷತ್ತಾದರೂ ಹಿಡಿಸುವ ಪಕ್ಷಕ್ಕೆ ನನಗೆ ತೃಪ್ತಿಯಾಗುತ್ತದೆ."[೨೦] ಇಲ್ಲಿ ದೇಜಗೌರವರು ಕಥಾ ನಿರೂಪಣೆಗಾಗಿ ಆ ತಂತ್ರವನ್ನು ಬಳಸಲಾಗಿದೆಯೇ ಹೊರತು, ಪಾತ್ರ ರಚನೆಗಲ್ಲ. ಈ ಕೃತಿಯಲ್ಲಿ ಘಟನೆಗಳು, ಸನ್ನಿವೇಶಗಳು, ದೃಶ್ಯಗಳು, ವರ್ಣನೆಗಳು ಪ್ರಧಾನವೇ ಹೊರತು ಪಾತ್ರಗಳಲ್ಲ. ಪಾತ್ರಗಳಲ್ಲದೆ ಘಟನೆಗಳು ಸಂಭವಿಸುವಂತಿಲ್ಲವಾದರೂ ಪಾತ್ರಗಳು ಘಟನೆಗಳಿಗೆ ಅಧೀನವೆಂದೇ ಹೇಳಬೇಕು. ಇಲ್ಲಿಯ ಘಟನೆಗಳು ಸನ್ನಿವೇಶ ವರ್ಣನೆಗಳಿಂದ ಪ್ರತ್ಯೇಕವೆನ್ನುವಂತೆಯೂ ಇಲ್ಲ ಎಂದು ಕೃತಿಯ ಪ್ರವೇಶದಲ್ಲಿಯೇ ಹೇಳಿಕೊಂಡಿದ್ದಾರೆ. ಕನ್ನಡದಲ್ಲಿ ಕಾರಂತರು ಮತ್ತು ದೇಜಗೌರವರು ಪ್ರವಾಸ ಕಥನಗಳಿಗೆ ಕಾದಂಬರಿಯ ರೂಪವನ್ನು ಕೊಟ್ಟು ಅದಕ್ಕೆ ಬೇರೊಂದು ವ್ಯಾಪ್ತಿಯನ್ನೇ ದೊರಕಿಸಿಕೊಟ್ಟ ಮಹನೀಯರು ಎಂಬ ಯಶಸ್ಸು ಅವರಿಗೆ ಲಭಿಸುತ್ತದೆ.

ಪ್ರವಾಸ ಸಾಹಿತ್ಯ ವ್ಯಕ್ತಿನಿಷ್ಠ ಸಾಹಿತ್ಯ. ಲಲಿತ ಪ್ರಬಂಧ, ಭಾವಗೀತೆಯಂತೆ ವೈಯಕ್ತಿಕ ಎಂದು ಡಾ.ಎಸ್. ವಿದ್ಯಾಶಂಕರ್ ಅಭಿಪ್ರಾಯಪಡುತ್ತಾರೆ. ಪ್ರವಾಸ ಸಾಹಿತ್ಯ ಅದು ವ್ಯಕ್ತಿ ನಿಷ್ಠವಾಗಿರುತ್ತದೆ. ಪ್ರವಾಸ ಕೈಗೊಂಡ ವ್ಯಕ್ತಿ ಅವನ ಕಣ್ಣು ಮನಸ್ಸುಗಳು ಚುರುಕಾಗಿ ತಾನು ಕಂಡ ದೃಶ್ಯ, ತಾನು ಪಡೆದುಕೊಂಡ ಅಪಾರವಾದ ಅನುಭವ ರಾಶಿಯನ್ನೇ ಅವಲಂಬಿಸಿ ಅದರ ಮೂಲಕ ಅಕ್ಷರ ರೂಪದಲ್ಲಿ ಬರೆಯಬೇಕಾಗುತ್ತದೆ. ಲೇಖಕನ ಅಪಾರವಾದ ಪಾಂಡಿತ್ಯ, ಅನುಭವಗಳನ್ನು ನಿರೂಪಿಸುವಾಗ ಬಳಸುವ ಭಾಷೆಯ ಬಳಕೆ ಮತ್ತು ನಿರೂಪಣೆಯ ಶೈಲಿ ಇಲ್ಲಿ ಪ್ರಮುಖವಾಗಿರುತ್ತದೆ. ಲೇಖಕನಲ್ಲಿ ಸೃಜನತೆ ಇಲ್ಲದಿದ್ದರೆ ಅದನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಗುವುದಿಲ್ಲ. ಅವನ ಅನುಭವಗಳನ್ನು ಸೀಮಿತವಾದ ಚೌಕಟ್ಟಿನೊಳಗೆ ಅವುಗಳನ್ನು ಬರೆಯಬೇಕಾದರೆ ಅವನು ಬಹಳ ತ್ರಾಸದಾಯಕವಾದ ಅನುಭವವನ್ನು ಹೊಂದಬೇಕಾಗುತ್ತದೆ.

---

[೨೦] ದೇಜಗೌ, ವಿಸ್ಮಯಗಳ ನಾಡಿನಲ್ಲಿ, ಪು. ೪.

ಇಲ್ಲಿ ಯಶಸ್ವಿಯಾಗುವುದಕ್ಕಿಂತ ಒಂದೊಂದು ಸಲ ವಿಫಲವಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ತಾನು ಮಾಡಿದ ಪ್ರವಾಸದ ಅನುಭವಗಳನ್ನು ಪದಗಳಲ್ಲಿ ಕಟ್ಟಿಕೊಡುವಾಗ ಅವನ ಪದ ಸಂಪತ್ತು ಕೂಡ ಶ್ರೀಮಂತವಾಗಿರಬೇಕು. ಬರಹ ರೂಪದಲ್ಲಿ ಪದಗಳಿಗೆ ಹುಡುಕಾಡಬಾರದು. ಹೀಗಾಗಿ ಕೆಲವರು ಪದಸಂಪತ್ತಿನ ಕೊರತೆಯಿಂದ ಸಾಹಿತ್ಯ ರಚನೆಯಲ್ಲಿ ವಿಫಲರಾಗಿದ್ದಾರೆ.

ಪ್ರವಾಸವನ್ನು ಕೈಗೊಂಡವರೆಲ್ಲ ಪ್ರವಾಸ ಸಾಹಿತ್ಯವನ್ನು ರಚಿಸಲು ಸಾಧ್ಯವಾಗಿಲ್ಲ. ತಮಗಾದ ಅನುಭವಗಳಿಗೆ ಸಾಹಿತ್ಯವಾಗಿ ನಿರೂಪಿಸುವುದಕ್ಕೆ ಅವರಿಗೆ ಸಾಧ್ಯವಾಗಿಲ್ಲ. ವಿದೇಶಗಳನ್ನು ಸುತ್ತಿ ಬಂದರೂ ಕೂಡ ಅವರಿಗೆ ತಾವು ನೋಡಿದ, ಅನುಭವಿಸಿದ ಎಲ್ಲವನ್ನು ಬರಹ ರೂಪದಲ್ಲಿ ಓದುಗರಿಗೆ ಹೇಳಿಕೊಳ್ಳುವ ಉತ್ಸಾಹ ಆದರೆ ಇದು ಎಲ್ಲರಿಂದ ಸಾಧ್ಯವಾಗುವುದಿಲ್ಲ. ತಮಗಾದ ಅನುಭವಗಳನ್ನು ಹೇಳಿಕೊಳ್ಳುವ ನಿರೂಪಣೆಶೈಲಿ, ಕಥನಾತಂತ್ರ, ವರ್ಣನೆ, ವಿಶ್ಲೇಷಣೆ ಇವುಗಳ ಕಡೆ ಗಮನವನ್ನು ನೀಡಬೇಕಾಗುತ್ತದೆ. ತಮ್ಮ ಅನುಭವಗಳನ್ನು ನಿರೂಪಿಸುವ ಧಾಟಿಯಲ್ಲಿ ವಿಫಲರಾಗಿ ಕೆಲವರು ರಚಿಸಿದ ಸಾಹಿತ್ಯ, ಪ್ರವಾಸ ಸಾಹಿತ್ಯವಾಗಿಲ್ಲ.

ಹೀಗೆ ಪ್ರವಾಸ ಸಾಹಿತ್ಯದ ಬಗೆಗಳು ರೂಪಗಳನ್ನು ಕಾಣಬಹುದಾಗಿದೆ. ಪ್ರವಾಸ ಸಾಹಿತ್ಯ ಸೃಜನಶೀಲ ಸಾಹಿತ್ಯಪ್ರಕಾರವಲ್ಲ ಎಂಬ ಮಾತಿದೆ. ನನ್ನ ದೃಷ್ಟಿಯಲ್ಲಿ ಪ್ರವಾಸ ಸಾಹಿತ್ಯ ಶುದ್ಧ ಸೃಜನಶೀಲ ಸಾಹಿತ್ಯ ಪ್ರಕಾರವಲ್ಲ. ಈಗ ಅದೊಂದು ಸಾಹಿತ್ಯ ರೂಪವೆಂದು ಪರಿಗಣಿತವಾಗಿದೆ. ಆದರೆ ಕಾವ್ಯ, ನಾಟಕ, ಕಾದಂಬರಿ, ಪ್ರಬಂಧ, ಸಣ್ಣಕಥೆಗಳಲ್ಲಿ ಲೇಖಕನ ಕಲ್ಪನಾಶಕ್ತಿ ಮತ್ತು ಸೃಜನಶೀಲತೆಗಳು ಪಾತ್ರವಹಿಸುವಂತೆ ಇಲ್ಲಿ ನಿರೂಪಿತವಾಗುವ ವಸ್ತು, ಪಾತ್ರ, ಸನ್ನಿವೇಶ ವರ್ಣನೆಗಳಲ್ಲಿ ಪ್ರವಾಸ ಕಥನ ಕಲ್ಪನಾಶಕ್ತಿ, ಸೃಜನಶೀಲತೆಗಳು, ಕ್ರಿಯಾಶೀಲವಾಗಲು ಮತ್ತು ಅವಕಾಶ ಆಸ್ಪದಗಳಿರುವುದಿಲ್ಲ. ಪ್ರವಾಸ ಕಥನದಲ್ಲಿ ಒಂದು ನಿರ್ಧಿಷ್ಟವಾದ ಪ್ರದೇಶ ವಸ್ತು, ನಿರ್ಧಿಷ್ಟವಾದಕಾಲ ಮತ್ತು ವಿವರಗಳಿರುತ್ತವೆ. ಅವನ್ನೇ ಪ್ರವಾಸ ಕಥಕವನೇನೂ ಸೃಷ್ಟಿಸಬೇಕಾಗಿಲ್ಲ. ತಾನು ಕಂಡದ್ದನ್ನು ಅನುಭವಿಸಿದ್ದನ್ನು ಆಕರ್ಷಕವಾಗಿ ಹೇಳಿದರೆ ಸಾಕು ಅಷ್ಟೇ. ಪ್ರವಾಸ ಕಥನದಲ್ಲಿ ಎಲ್ಲೂ ಲೇಖಕನ ಕಲ್ಪನೆ ಅರಳುವುದಿಲ್ಲ. (Blossoming of Imogination) ಅದರಲ್ಲಿ ಉದ್ದಕ್ಕೂ ಆತನ ವರ್ಣನೆ ಕಲೆ, ನಿರೂಪಣಾ ವೈಖರಿ (Discriptive art) ಮಾತ್ರ ಎದ್ದು ಕಾಣುತ್ತದೆ. ಸೃಜನಶೀಲತೆಗೆ ಕಿಂಚಿತ್ತು ಅವಕಾಶವಿಲ್ಲದ ಈ ಪ್ರಕಾರವನ್ನು ಹೇಗೆ ಸೃಜನಶೀಲ ಪ್ರಕಾರವೆಂದು ಕರೆಯುವುದು? ಎಂದು ಎನ್.ಎಸ್. ತಾರಾನಾಥರು ಪ್ರಶ್ನಿಸುತ್ತಾರೆ.[೨೧]

---

[೨೧] ಸಂ. ಮಲ್ಲೇಪುರಂ, ಜಿ. ವೆಂಕಟೇಶ್, ಪ್ರವಾಸ ಸಾಹಿತ್ಯ ಒಂದು ಅಧ್ಯಯನ, ಪು. ೩೯.

ಪ್ರವಾಸ ಸಾಹಿತ್ಯವು ಒಂದು ಸೃಜನಶೀಲ ಸಾಹಿತ್ಯವಲ್ಲ ಎಂಬ ಮಾತನ್ನು ಒಪ್ಪಲಾಗುವುದಿಲ್ಲ. ಇದು ಅವರ ವೈಯಕ್ತಿಕ ಅಭಿಪ್ರಾಯವಾಗಿರಬಹುದು. ಒಬ್ಬ ಲೇಖಕ ಪ್ರವಾಸವನ್ನು ಕೈಗೊಂಡು ತಾನು ಕಂಡ ಚಿರನೂತನ ಅನುಭವಗಳ ಸಾರವನ್ನು ತನ್ನ ಬುದ್ಧಿಶಕ್ತಿ ಸಾಮರ್ಥ್ಯಕ್ಕೆ ತಕ್ಕಂತೆ ತನ್ನ ಸೃಜನಶೀಲ ಪ್ರತಿಭೆಯ ಮೂಲಕ ಓದುಗನಿಗೆ ತಲುಪಿಸುತ್ತಾನೆ. ಅವನು ಮಾಡುವ ವರ್ಣನೆ, ಬಳಸುವ ಪದ ಸಂಪತ್ತು, ವಸ್ತುವನ್ನು ವಿಶ್ಲೇಷಿಸುವ ರೀತಿ, ಸಾಮಾಜಿಕ ಅಧ್ಯಯನಗಳು ಇವುಗಳನ್ನು ತಾನು ಅನುಭವಿಸಿ ತನ್ನ ಕಲ್ಪನಾಶಕ್ತಿ ಮೂಲಕ ಸಾಹಿತ್ಯವನ್ನು ರಚಿಸುತ್ತಾನೆ. ಇಲ್ಲಿ ಬರಿ ವರ್ಣನೆ ಕಲೆ, ನಿರೂಪಣಾ ವೈಖರಿ ಮಾತ್ರ ಕಂಡುಬಂದರೂ, ಸೃಜನತೆಯಿಲ್ಲದೆ ಯಾವುದೇ ಪ್ರವಾಸಿಗ ತಾನು ಕಂಡ ದೇಶದ ವಿವರಗಳನ್ನು ಓದುಗರಿಗೆ ತಲುಪಿಸಲು ಸಾಧ್ಯವಾಗುವುದಿಲ್ಲ. ಆ ರೀತಿ ಅವನು ಬರೆದರೆ ಅದು ಯಾರು ಓದದ ಕೃತಿಯಾಗಿ ಉಳಿಯುತ್ತದೆ. ಪ್ರವಾಸ ಕಥನದಲ್ಲಿ ಅಪರಿಚಿತ ವ್ಯಕ್ತಿಯ ವೈಶಿಷ್ಟ್ಯವನ್ನೂ, ಕಂಡ ಪ್ರದೇಶವನ್ನೂ ಆಪ್ತವಾಗಿ ವರ್ಣಿಸುವ ಅವಕಾಶವಿರುವುದಿಲ್ಲ. ಹೊಸದಾಗಿ ಏನನ್ನಾದರೂ ಸೃಷ್ಟಿಸುವ ಅವಕಾಶವಿರುವುದಿಲ್ಲ ಎಂಬ ಹೇಳಿಕೆಯ ಬಗ್ಗೆ ಡಾ.ಎಸ್. ವಿದ್ಯಾಶಂಕರ್‌ರವರು ಲೇಖಕರ ಹೇಳಿಕೆ ವಾಸ್ತವ್ಯಕ್ಕೆ ದೂರವಾದುದು. ಲೇಖಕರ ವ್ಯಾಪಕದ ಅಧ್ಯಯನದ ಕೊರತೆಯಿಂದ ಹುಟ್ಟಿಕೊಂಡ ಅಪ್ರಬುದ್ಧ ಆಡಂಬರದ ಹೇಳಿಕೆ ಎನ್ನಬಹುದು. ಹೊಸದಾಗಿ ಏನನ್ನಾದರೂ ಸೃಷ್ಟಿಸುವ ಅವಕಾಶವಿರುವುದಿಲ್ಲ ಎನ್ನುವ ಮಾತನ್ನು ಎಲ್ಲಾ ಸೃಜನ ಸಾಹಿತ್ಯ ಪ್ರಕಾರದ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ ಅದರ ಔಚಿತ್ಯದ ಪ್ರಶ್ನೆ ಬರುತ್ತದೆ.[೨೨]

ಪ್ರವಾಸ ಸಾಹಿತ್ಯ ವರ್ಣನೆಗಳಿಂದ ಕೂಡಿರುತ್ತದೆ. ಪ್ರವಾಸವನ್ನು ಮಾಡಿದವರು ಇತರರಿಗೆ ಪ್ರವಾಸ ಮಾಡಿದ ಅನುಭವವಾಗುವಂತೆ ಹಿತಮಿತವಾದ ತಮ್ಮ ಕಣ್ಣು ಮನಗಳು ಕಂಡುಂಡ ವಿಶಿಷ್ಟ ಅನುಭವಗಳನ್ನು ತನ್ನ ಸಾಹಿತ್ಯದ ಮೂಲಕ ಇತರರಿಗೆ ಅಂದರೆ ಓದುಗರನ್ನು ಕೃತಿಯಲ್ಲಿ ಲೀನವಾಗುವಂತೆ ರಚನೆಯನ್ನು ಮಾಡುವ ಪ್ರತಿಭೆ ಸಾಹಿತ್ಯದಲ್ಲಿರಬೇಕು. ಡಾ.ವಿ.ಕೃ. ಗೋಕಾಕರವರು ಹೇಳುವಂತೆ "ಪ್ರವಾಸ ಸಾಹಿತಿಯು ತಾನು ಕಂಡ ಜಗತ್ತನ್ನೆಲ್ಲಾ ಆ ನವೀನ ಸೃಷ್ಟಿಯ ಮೇಲೆ ಆರೋಪಿಸಿದ ರೀತಿಯು ಎಲ್ಲೆಡೆಗೆ ಸ್ಫುಟವಾಗಿರಬೇಕು. ಇದು ಸಾಧಿಸಿದಲ್ಲಿ ರಸಾನುಭವ, ಮನೋರಂಜನೆ, ಉಪಯುಕ್ತತೆ ಮೊದಲಾದ ಗುರಿಗಳೆಲ್ಲ ಸಫಲವಾಗುವುವು. ಹೀಗೆ ಪ್ರವಾಸವನ್ನು ಕೈಗೊಂಡ ಅನುಭವಗಳನ್ನು ಪ್ರವಾಸಿಗರು ತಾನು ಕಂಡ ದೇಶದ ವರ್ಣನೆ, ವಿಶ್ಲೇಷಣೆ, ನೂತನ ಅನುಭವಗಳ ಸಾರವನ್ನು ಓದುಗರಿಗೆ ನೀಡುತ್ತಾನೆ. ಈ ಕೃತಿಯನ್ನು

---

[೨೨] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ. ಪು. ೧೩೭.

ಓದಿದವರಿಗೆ ತಾನು ಕೂಡ ಪ್ರವಾಸವನ್ನು ಕೈಗೊಳ್ಳಬೇಕೆಂಬ ಅಭಿಲಾಷೆ ಉಂಟಾಗುವಂತೆ ಮಾಡಬೇಕು. ಪ್ರವಾಸ ಕಥನವನ್ನು ಬಹಳಷ್ಟು ಜನರು ಬರೆದರೂ ಅವರ ಎಲ್ಲ ಕೃತಿಗಳು ಸಾಫಲ್ಯವನ್ನು ಪಡೆಯುವಲ್ಲಿ ವಿಫಲವಾಗಿವೆ. ಹೀಗಾಗಿ ಕನ್ನಡದಲ್ಲಿ ಪ್ರವಾಸ ಕಥನ ಇವತ್ತು ಒಂದು ಸಾಹಿತ್ಯ ಪ್ರಕಾರವಾಗಿ ಮೌಲಿಕವಾದ ಒಂದು ಸಾಹಿತ್ಯದ ಸೇರ್ಪಡೆಯಾಗಿ ಬೆಳೆದಿದೆ. ಪ್ರವಾಸ ಸಾಹಿತ್ಯ ಒಂದು ಹೊಸ ಆಯಾಮವನ್ನು ಮತ್ತು ಕನ್ನಡ ಜನಕ್ಕೆ ಬೇರೆ, ಬೇರೆ ದೇಶದ ಅನುಭವಗಳನ್ನು, ಮೌಲ್ಯಗಳನ್ನು, ನಾಗರೀಕತೆಗಳನ್ನು, ಸಂಸ್ಕೃತಿಗಳನ್ನು ಪರಿಚಯ ಮಾಡಿ ಕೊಡುತ್ತದೆ. ಪ್ರಗತಿಯನ್ನು ಹೊಂದಿರುವ ದೇಶ, ಪ್ರಗತಿಯನ್ನು ಕೈಗೊಳ್ಳಬೇಕಾದ ವಿಧಾನಗಳನ್ನು, ರಾಜಕೀಯ, ವಿಜ್ಞಾನ, ಸಾಮಾಜಿಕ, ಸಂಸ್ಕೃತಿ, ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲಿ ಆಗಿರುವ ಬದಲಾವಣೆಗಳನ್ನು ಓದುಗನಿಗೆ ಮನವರಿಕೆ ಮಾಡಿಕೊಡುತ್ತದೆ. ಇದನ್ನು ಓದುವುದರಿಂದ ಓದುಗನಿಗೆ ಹೊಸಜ್ಞಾನ, ನೂತನ ಅನುಭವ ದೊರೆಯುತ್ತದೆ.

# ಅಧ್ಯಾಯ – ೨

## ಕನ್ನಡದಲ್ಲಿ ಪ್ರವಾಸ ಕಥನಗಳು : ಒಂದು ಸಮೀಕ್ಷೆ

ಪ್ರವಾಸವು ಮನುಷ್ಯನಲ್ಲಿ ಹೊಸ ಅನುಭವಗಳೊಂದಿಗೆ, ನವ ಚೈತನ್ಯವನ್ನು ತುಂಬುತ್ತದೆ. ಮಾನವನಿಗೆ ಪ್ರವಾಸ ಒಂದು ಹವ್ಯಾಸವಾಗಿದೆ. ತನ್ನ ಬದುಕನ್ನು ಹಸನುಗೊಳಿಸಿಕೊಳ್ಳಲು ಮನಸ್ಸಿನ ನೋವುಗಳನ್ನು ಮರೆತು ಹೊಸ ಪ್ರದೇಶಕ್ಕೆ ಹೋಗಿ ಸುತ್ತಾಡಿ ಮುದುಡಿದ ಮನಕ್ಕೆ ಹೊಸ ಚೈತನ್ಯದ ಸಾರವನ್ನು ತುಂಬಿಕೊಂಡು ಅಲ್ಲಿಯ ಅನುಭವಗಳನ್ನು ಬರಹ ರೂಪದಲ್ಲಿ ಹಿಡಿದಿಡುವ ಪ್ರಯತ್ನವೇ ಪ್ರವಾಸ ಸಾಹಿತ್ಯ. ಪ್ರವಾಸ ಸಾಹಿತ್ಯದ ಅನುಭವಗಳನ್ನು ಮೊದಲಿಗೆ ರಚನೆಯಾದದ್ದು. ಪಾಶ್ಚಾತ್ಯರಿಂದ ನಮ್ಮಲ್ಲಿ ೧೯ನೇ ಶತಮಾನದವರೆಗೆ ಪ್ರವಾಸ ಸಾಹಿತ್ಯ ರಚನೆಯಾಗಿರಲಿಲ್ಲ. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ನಂತರ ಬೆಳೆದು ಬಂದಿದೆ.

"ಇಂಗ್ಲೀಷ್ ಭಾಷೆಯಲ್ಲಿ ಪ್ರವಾಸ ಸಾಹಿತ್ಯ ೧೭-೧೮ನೇ ಶತಮಾನಗಳಿಂದಲೂ ಗದ್ಯಸಾಹಿತ್ಯದಲ್ಲಿ ಅದು ಸಮ್ಮಿಳಿತವಾಗಿಯೇ ನಡೆದುಕೊಂಡು ಬಂದಿದೆ. ಬಹು ಸಂಖ್ಯಾತ ಸಾಹಿತಿಗಳು, ಕವಿಗಳು ತಮ್ಮ ಪ್ರವಾಸಾನುಭವಗಳನ್ನು ಕುರಿತು ತಮ್ಮ ಇಷ್ಟಮಿತ್ರರೊಂದಿಗೆ ನಡೆಸಿದ ಪತ್ರ ವ್ಯವಹಾರಗಳನ್ನು, ದಿನಚರಿಗಳನ್ನು ವಿಶಿಷ್ಟ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಗದ್ಯ ಪದ್ಯ ನಾಟಕಾದಿ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ಪ್ರವಾಸಾನುಭವ ಎದ್ದು ಕಾಣುತ್ತದೆ. ಅಮೆರಿಕ, ಜರ್ಮನಿ, ಮತ್ತು ರಷ್ಯ ದೇಶಗಳ ಸಾಹಿತಿಗಳೂ ಈ ಬಗೆಯ ಸಾಹಿತ್ಯವನ್ನು ತುಂಬ ಹುಲಸಾಗಿ ಬೆಳೆಸಿದ್ದಾರೆ."[೧]

ಭಾರತೀಯ ಪ್ರವಾಸ ಸಾಹಿತ್ಯ ರಚನೆಗೆ ಪಾಶ್ಚಾತ್ಯ ಸಾಹಿತ್ಯ ಪ್ರೇರಣೆಯಾಗಿದೆ. ಪ್ರಾಚೀನ ಭಾರತದಲ್ಲಿ ಪ್ರವಾಸ ಸಾಹಿತ್ಯದ ಗುಂಪಿಗೆ ಸೇರಬಹುದಾದ ಹಲವು ಗ್ರಂಥಗಳಿವೆ. ಕ್ರಿ.ಶ. ೧೧೪೮-೫೦ರಲ್ಲಿ ರಚಿತವಾದ ಕಲ್ಹಣನ 'ರಾಜತರಂಗಿಣಿ' ಕ್ರಿ.ಶ. ೧೪೫೯ರಲ್ಲಿ ಜೋನರಾಜ ಮತ್ತವನ ಶಿಷ್ಯ ಶ್ರೀವರ, ಅನಂತರ ಪ್ರಾಜ್ಯಭಟ್ಟ, ಶುಕ ಸೋಮೇಶ್ವರ, ಅರಿಸಿಂಹ ಮುಂತಾದವರು ಐತಿಹಾಸಿಕ, ಭೌಗೋಳಿಕ ಹಾಗೂ ಅಂದಿನ ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುವಂಥಹ ಗ್ರಂಥಗಳನ್ನು ರಚಿಸಿದ್ದಾರೆ.

---

[೧] ಕನ್ನಡ ವಿಶ್ವಕೋಶ, ಸಂಪುಟ – ೩.

ಕನ್ನಡದಲ್ಲಿ ಪ್ರವಾಸ ಸಾಹಿತ್ಯ ರಚನೆ ೧೯ನೇ ಶತಮಾನದಲ್ಲಿ ಆರಂಭವಾಯಿತು. ಮುಂದೆ ನಂತರ ಸುಮಾರು ವರ್ಷಗಳವರೆಗೆ ಅಂದರೆ ೩೫ ವರ್ಷಗಳ ಕಾಲ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಕುರಿತು ಯಾವ ಗ್ರಂಥಗಳೂ ಬರಲಿಲ್ಲ. ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿಯವರು ೧೮೮೦ರಲ್ಲಿ 'ದಕ್ಷಿಣಭಾರತ ಯಾತ್ರೆ' ಎಂಬ ಪ್ರವಾಸ ಗ್ರಂಥವನ್ನು ಪ್ರಕಟಿಸಿದರು. ಈ ಕೃತಿ ಈ ವಿಭಾಗದಲ್ಲಿ ಆದ್ಯ ಹಾಗೂ ಮೇರುಕೃತಿ. "ಕೃತಿಯಲ್ಲಿ ಲೇಖಕರು ತಮ್ಮ ಮಿತ್ರರೊಂದಿಗೆ ಹಂಪಿಗೆ ಹೋಗಿ ಅಲ್ಲಿನ ಪಾಳು ಹಂಪಿಯನ್ನು ಕಂಡು ತಮಗಾದ ಅನುಭವವನ್ನು ಈ ಗ್ರಂಥದಲ್ಲಿ ಪಡಿ ಮೂಡಿಸಿದ್ದಾರೆ."[೨] ಇದೊಂದು ರಸಭರಿತ ಪ್ರಬಂಧ.

'ದಕ್ಷಿಣ ಭಾರತ ಯಾತ್ರೆ' ಮೊದಲ ಪ್ರವಾಸ ಕಥನವಾಗಿದೆ. ಇಲ್ಲಿ ಲೇಖಕರು ತಮ್ಮ ಲೋಕಾನುಭವ, ತತ್ತ್ವಚಿಂತನೆ ಮತ್ತು ಜೀವನ ದೃಷ್ಟಿಗಳ ಸಂಗಮವನ್ನು ಕೃತಿಯಲ್ಲಿ ಕಾಣಬಹುದು. "ಎರಡು ದಿನಗಳ ಅಲ್ಪಾವಧಿಯಲ್ಲಿ ಇನ್ನೂರ ಐವತ್ತು ವರ್ಷಗಳ ಚರಿತ್ರೆಯನ್ನು ಸತ್ತ್ವತಃ ಲೇಖಕರು ಇಲ್ಲಿ ಅನುಭವ ಮಾಡಿಸಿಕೊಡುತ್ತಾರೆ. ಸುಖ ದುಃಖಗಳೆರಡನ್ನು ಓದುಗರಿಗೆ ಉಣಬಡಿಸುತ್ತಾರೆ. ಕೊನೆಯಲ್ಲಿ ಬರುವ ಸ್ವಪ್ನ ಮಾಲಿಕೆಗಳಲ್ಲಿ ಗತಕಾಲದ ವೈಭವ, ವಿನಾಶಗಳು ಹೃದಯ ವಿದ್ರಾವಕವಾಗಿ ನಿರೂಪಿತವಾಗಿದೆ. ಕವಿಯ ಅನುಭವಕ್ಕೆ ಐತಿಹಾಸಿಕ ದೃಷ್ಟಿಯೂ ಉಜ್ವಲ ಅಭಿಮಾನವೂ ಬೆಸೆದುಕೊಂಡಿದೆ. ನಾಲ್ಕು ಮುದ್ರಣಗಳನ್ನು ಕಂಡಿರುವುದೇ ಈ ಗ್ರಂಥದ ಅಗಾಧ ಜನಪ್ರಿಯತೆಗೆ ಸಾಕ್ಷಿ"[೩] ಎಂದು ಪ್ರಥಮ ಪ್ರವಾಸ ಕಥನದ ಬಗ್ಗೆ ಮತ್ತು ಸಾಹಿತ್ಯ ಓದುಗರನ್ನು ತನ್ನತ್ತ ಸೆಳೆದುಕೊಂಡಿರುವುದಕ್ಕೆ ಈ ಕೃತಿ ಕಾರಣೀಭೂತವಾಗಿದೆ.

ಹೀಗೆ ಹಂಪೆಯನ್ನು ನೋಡಿ ಬಂದ ಲೇಖಕರ ಅನುಭವಗಳು ಸಾಹಿತ್ಯ ರೂಪವನ್ನು ಪಡೆದುಕೊಂಡು ಪ್ರವಾಸ ಸಾಹಿತ್ಯಕ್ಕೆ ಅಡಿಗಲ್ಲಾಯಿತು ಮತ್ತು ಜನಪ್ರಿಯತೆ ಪಡೆಯಲು ಕಾರಣವಾಯಿತು. ನಂತರ ವಿದೇಶಗಳಿಗೆ ಪ್ರವಾಸ ಕೈಗೊಂಡವರು ತಮ್ಮ ಪ್ರವಾಸದ ಅನುಭವಗಳಿಗೆ ಅಕ್ಷರ ರೂಪವನ್ನು ಕೊಟ್ಟಿತು. ಅವರಲ್ಲಿ ವಿ.ಕೃ. ಗೋಕಾಕರವರ "ಸಮುದ್ರದಾಚೆಯಿಂದ", 'ಇಂದಲ್ಲ ನಾಳೆ' ಮತ್ತು 'ಸಮುದ್ರದೀಚೆಯಿಂದ' ಎಂಬ ಕೃತಿಗಳು ಪ್ರವಾಸ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಪಡೆದ ಕೃತಿಗಳಾಗಿವೆ. "೧೯೩೬-೩೭ರಲ್ಲಿ ಇಂಗ್ಲೆಂಡ್‌ಗೆ ಹೋದ ಗೋಕಾಕರು ಅಲ್ಲಿ ತಾವು ಕಂಡುಂಡ ಅನುಭವಗಳನ್ನು ತಮ್ಮವರಿಗೆ ಬರೆದ ಪತ್ರಗಳ ಸಂಕಲನವೇ 'ಸಮುದ್ರದಾಚೆಯಿಂದ' ಎಂಬ ಕೃತಿ 'ಇಂದಲ್ಲ ನಾಳೆ' ಅಮೆರಿಕಾದ ಜನರ

---

[೨] ಕನ್ನಡ ವಿಶ್ವಕೋಶ, ಸಂಪುಟ ೩

[೩] ಕನ್ನಡ ವಿಶ್ವಕೋಶ, ಸಂಪುಟ ೩.

ಗಡಿಬಿಡಿಯ ಬದುಕು, ನಾಗರೀಕತೆಗಳ ಚಿತ್ರಣವನ್ನು ಒಳಗೊಂಡಿದೆ. ಇಲ್ಲಿನ ನವೀನ ಚಂಪೂ ಶೈಲಿ, ವಸ್ತು ನಿರೂಪಣೆ ಹೊಸದಾಗಿ ಕಾವ್ಯಮಯವಾಗಿ ಮೂಡಿ ಬಂದಿದೆ."[೪]

ಶಿವರಾಮ ಕಾರಂತರ 'ಆಬುವಿನಿಂದ ಬರಾಮಕ್ಕೆ', ಅಪೂರ್ವ ಪಶ್ಚಿಮ' ಎಂಬ ಎರಡು ಕೃತಿಗಳು ಪ್ರವಾಸ ಸಾಹಿತ್ಯದ ಕಿರೀಟಗಳಂತಿವೆ. 'ಆಬುವಿನಿಂದ ಬರಾಮಕ್ಕೆ', 'ಆಬು ಕಾಶ್ಮೀರ, ಪುಷ್ಕರ, ಜಯಪುರ, ದಿಲ್ಲಿ, ಸಿಮ್ಲಾ, ಆಗ್ರಾ, ಕಾಶಿ, ಡಾಲ್ಮಿಯಾ, ಕಲ್ಕತ್ತೆ ಮತ್ತು ಬರಾಮಗಳಲ್ಲಿ ಸಂಚರಿಸಿ ಅಲ್ಲಿನ ನಿಸರ್ಗ, ವಾಸ್ತು, ಸಂಗೀತ, ಸಾಹಿತ್ಯ ಜನಜೀವನಾದಿಗಳನ್ನು ಮನಮುಟ್ಟುವಂತೆ ಕೃತಿಯಲ್ಲಿ ಚಿತ್ರಿಸಲಾಗಿದೆ. 'ಅಪೂರ್ವ ಪಶ್ಚಿಮ', ಕಾರಂತರ ವಿದೇಶಿ ಪ್ರವಾಸದ ಅನುಭವಗಳ ಸಾರವತ್ತಾದ ಕೃತಿಯಾಗಿದೆ. ಲಂಡನ್, ನಾರ್ವೆ, ಸ್ವೀಡನ್, ಬೆಲ್ಜಿಯಂ, ಇಟಲಿ, ಹಾಗೂ ರೋಮ್ ಈ ದೇಶಗಳ ಸುತ್ತಾಟದಲ್ಲಿ ತಾವು ಪಡೆದ ಅನುಭವಗಳ ರಾಶಿಯನ್ನು ಓದುಗರಿಗೆ ಪರಿಚಯಿಸುವ ಕೃತಿಯಾಗಿದೆ. "ಕಾರಂತರು ಪ್ರಕೃತಿಯ ಸೌಂದರ್ಯ, ಕಲೆ, ಪ್ರಪಂಚದ ಜನರ ಬದುಕು ಅವರ ಸುಖಮಯ ಬದುಕಿಗೆ ಕಾರಣವಾಗಿರುವ ಉದ್ಯಮ ಇವುಗಳನ್ನು ಪ್ರಧಾನವಾಗಿ ತಮ್ಮ ಪ್ರವಾಸ ಕಥನದಲ್ಲಿ ಅಧ್ಯಯನ ಮಾಡಿರುವರು. ಆದ್ದರಿಂದಲೇ ಈ ಕೃತಿಗಳಿಗಿಂತ ಭಿನ್ನವಾದುದು, ಮೌಲಿಕವಾದುದು."[೫]

ಕಾರಂತರು ತಮ್ಮ ಅಗಾಧವಾದ ಪಾಂಡಿತ್ಯ, ಸೃಜನಶೀಲತೆಯಿಂದ ತಾವು ಪ್ರವಾಸ ಮಾಡಿದ ದೇಶಗಳ ಎಲ್ಲಾ ವಿವರಗಳನ್ನು ಸವಿವರವಾಗಿ ಪ್ರಸ್ತುತಪಡಿಸುತ್ತಾರೆ. ಈ ಕೃತಿಯನ್ನು ಓದಿದಾಗ ಓದುಗನಿಗೆ ಪ್ರವಾಸದ ಅನುಭವವಾಗುತ್ತದೆ. ಕಾರಂತರ 'ಅಪೂರ್ವ ಪಶ್ಚಿಮ' ಕೃತಿಯ ಬಗ್ಗೆ ಅನೇಕ ವಿದ್ವಾಂಸರು ಪ್ರಸಂಶೆಯ ಮಾತುಗಳನ್ನಾಡಿದ್ದಾರೆ. ಪಾಶ್ಚಾತ್ಯ ಪ್ರವಾಸದ ಅನುಭವಗಳು ಅವರ ಕೃತಿಯಲ್ಲಿ ವಿಸ್ತಾರವಾಗಿ ಮೂಡಿ ಬಂದಿದೆ. ಕಾದಂಬರಿ ರೂಪದಲ್ಲಿ ಪ್ರವಾಸ ಸಾಹಿತ್ಯವನ್ನು ರಚಿಸಿದ ಕೀರ್ತಿ ಕೂಡ ಕಾರಂತರಿಗೆ ಸಲ್ಲುತ್ತದೆ. 'ಆಳ ನಿರಾಳ' ಕಾದಂಬರಿಯಲ್ಲಿ ಪ್ರವಾಸಾನುಭವವನ್ನು ಮಿಳಿತಗೊಳಿಸಿ ಕೃತಿಯನ್ನು ರಚಿಸಿದ್ದಾರೆ.

'ಕೊರವಂಜಿಯ ಪಡುವಣ ಯಾತ್ರೆ' ರಾ.ಶಿ.ಯವರು ರಷ್ಯಾ ಮತ್ತು ಯುರೋಪ್ ದೇಶಗಳಲ್ಲಿ ನಡೆಸಿದ ಪ್ರವಾಸದ ಅನುಭವಗಳ ಕೃತಿ, ರಾ.ಶಿ.ಯವರು ವೃತ್ತಿಯಲ್ಲಿ ವೈದ್ಯರು ಹಾಗೆಯೇ ಕನ್ನಡ ಸಾಹಿತ್ಯದಲ್ಲಿ ನಗೆಬರಹಗಾರರಾಗಿಯೂ ಪ್ರಸಿದ್ಧರು. ಇವರು ಪ್ರವಾಸ

---

[೪] ಕನ್ನಡ ವಿಶ್ವಕೋಶ, ಸಂಪುಟ ೩.
[೫] ಕನ್ನಡ ವಿಶ್ವಕೋಶ, ಸಂಪುಟ ೩.

ಕಥನದಲ್ಲಿ ತಿಳಿಯಾದ ಹಾಸ್ಯದ ಮೂಲಕ ತಮ್ಮ ಅನುಭವಗಳನ್ನು ವಿವರಿಸುತ್ತಾರೆ. ಹಾಸ್ಯ ಸಾಹಿತಿಯೋರ್ವರು ವೈದ್ಯರೂ ಆಗಿದ್ದಾಗ ಅವರ ಪ್ರವಾಸದ ಅನುಭವ ಕಥನ ಎಷ್ಟರ ಮಟ್ಟಿಗೆ ಖುಷಿಯೊಂದಿಗೆ ತಿಳಿವನ್ನೂ ನೀಡುತ್ತಿದೆಂಬುದಕ್ಕೆ ರಾ.ಶಿ.ಯವರ ಈ ಕೃತಿ ನಿದರ್ಶನವಾಗಿದೆ.

ದಿನಕರ ದೇಸಾಯಿಯವರ 'ನಾ ಕಂಡ ಪಡುವಣ' ಕೃತಿಯಲ್ಲಿ ಅಂತರರಾಷ್ಟ್ರೀಯ ಕೂಲಿಕಾರರ ಪರಿಷತ್ತಿನಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿ ಅಲ್ಲಿನ ಅನುಭವಗಳನ್ನು ಅಲ್ಲಿಯ ಕೂಲಿಕಾರರ ಸಂಘಟನೆ, ಸಾರಿಗೆ ವ್ಯವಸ್ಥೆ, ಶಿಸ್ತು, ಪಾಕಶಾಸ್ತ್ರ ಮುಂತಾದವುಗಳ ಬಗ್ಗೆ ಕಥೆಯ ರೀತಿಯಲ್ಲಿ ನಿರೂಪಿಸಿದ್ದಾರೆ.

"ಎಸ್ ರಜತಾದ್ರಿಯವರು ಡೆನ್ಮಾರ್ಕ್, ಸ್ವೀಡನ್, ಇಂಗ್ಲೆಂಡ್, ಫ್ರಾನ್ಸ್ ಮೊದಲಾದ ಪಶ್ಚಿಮ ರಾಷ್ಟ್ರಗಳನ್ನು ಸುತ್ತಿ ಬಂದು ತಮಗಾದ ಅನುಭವಗಳನ್ನು 'ಪಶ್ಚಿಮದ ಹೊಂಬೆಳಕು' ಎಂಬ ತಮ್ಮ ಪ್ರವಾಸ ಕಥನದಲ್ಲಿ ನಿರೂಪಿಸಿರುವರು. ಸಾಮಾನ್ಯ ಓದುಗನನ್ನು ಗಮನದಲ್ಲಿಟ್ಟುಕೊಂಡು ಈ ಕೃತಿಯಲ್ಲಿ ವಿಷಯ ಸಂಗ್ರಹಣೆ ಮಾಡಲಾಗಿದೆ."[೬]

ದೇಜಗೌರವರು ಇಂಗ್ಲೆಂಡ್‌ನಲ್ಲಿ ನಡೆದ ಕಾಮನ್ವೆಲ್ತ್ ವಿಶ್ವವಿದ್ಯಾನಿಲಯಗಳ ಒಕ್ಕೂಟದಲ್ಲಿ ಭಾಗವಹಿಸಿದ ತಮ್ಮ ಪ್ರವಾಸದ ಅನುಭವಗಳನ್ನು 'ದಿನಚರಿ' ರೂಪದಲ್ಲಿ ಕೊಟ್ಟಿರುವರು. ದೇಜಗೌರವರ 'ಪ್ರವಾಸಿಯ ದಿನಚರಿ' ವಿಷಯ ಸಂಪತ್ತಿನಿಂದ ಮನ ಮುಟ್ಟುವ ಸರಳ ಹಾಗೂ ಸುಂದರ ನಿರೂಪಣೆಯಿಂದ ಆಕರ್ಷಕ ಗದ್ಯ ಶೈಲಿಯಿಂದ ಒಂದು ಒಳ್ಳೆಯ ಕೊಡುಗೆಯಾಗಿದೆ. ಎಲ್ಲೂ ನಿಲ್ಲದೆ ಸುಲಭವಾಗಿ ಓದಿಸಿಕೊಂಡು ಹೋಗುವ ಇದರ ನಿರಾಡಂಬರ ಶೈಲಿ ಚಿರಕಾಲ ನಮ್ಮ ನೆನಪಿನಲ್ಲಿ ಉಳಿಯುತ್ತದೆ.

ಹೊ. ಶ್ರೀನಿವಾಸಯ್ಯನವರು ತಮ್ಮ ಪತ್ನಿ ಶ್ರೀಮತಿ ಜಯಶ್ರೀಯವರೊಡನೆ ಮಾಡಿದ ಯೂರೋಪ್ ದೇಶದ ಪ್ರವಾಸ ಕಥನವು 'ಜಯಶ್ರೀ ಕಂಡ ಐರೋಪ' ಎಂಬ ಕೃತಿಯ ರೂಪದಲ್ಲಿ ಬಂದಿದೆ. ತಮ್ಮ ಪ್ರವಾಸ ಕಾಲದಲ್ಲಿ ಭೇಟಿಯಾದ ಜನರ ಬಗ್ಗೆ ನೋಡಿದ ಸ್ಥಳಗಳ ಬಗೆಗೆ ಸ್ವಾರಸ್ಯಕರವಾಗಿ ಹೇಳಿದ್ದಾರೆ.

---

[೬] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೬೯.

ಹೇಮಲತಾ ಮಹಿಷಿಯವರ 'ಯುರೋಪ ದರ್ಶನ' ೩೫ ದಿನಗಳ ಯೂರೋಪ್ ಪ್ರವಾಸ ಕಥನ. ಅದು ಅವರ ಗ್ರಹಿಕೆಯ ಇತಿ ಮಿತಿಯನ್ನು ವಿಶೇಷವಾಗಿ ಅವಲಂಬಿಸಿರುತ್ತದೆ. ಪ್ರವಾಸಿ ತಾನು ಪ್ರವಾಸ ಕೈಗೊಂಡ ದೇಶದ ಜನರ ಸಾಮಾಜಿಕ, ಸಾಂಸ್ಕೃತಿಕ ಬದುಕನ್ನು ಗ್ರಹಿಸುವ ಮತ್ತು ಅದನ್ನು ಸಮರ್ಥವಾಗಿ ಬರಹ ರೂಪದಲ್ಲಿ ಶಕ್ತನಾದಾಗ ಮಾತ್ರ ಪ್ರವಾಸಿ ಸಾಹಿತ್ಯ ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಈ ಕೃತಿಯಲ್ಲಿ ಅವರು ಸಮರ್ಥವಾಗಿ ಕುತೂಹಲಕಾರಿಯಾಗಿ ಚಿತ್ರಿಸಿದ್ದಾರೆ.

ತ್ರಿವೇಣಿಶಿವಕುಮಾರ್‌ರವರ 'ನಿಸರ್ಗಪ್ರಿಯರ ನಾಡುಗಳಲ್ಲಿ' ಎನ್ನುವ ಕೃತಿ ಸ್ವಿಜರ್‌ಲ್ಯಾಂಡ್, ಇಟಲಿ, ಜರ್ಮನಿ, ಹಾಲೆಂಡ್, ಫ್ರಾನ್ಸ್, ದೇಶಗಳ ಸುತ್ತಾಟದ ಅನುಭವದ ಕಥನ. ಭೇಟಿ ಮಾಡಿದ ದೇಶದ ಪ್ರಾಕೃತಿಕ ಸೊಬಗು, ಕಲೆ ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಸಂಪೂರ್ಣ ಮಾಹಿತಿಗಳನ್ನು ನೀಡಿದ್ದಾರೆ.

ಆಶಾದೇವಿ ನೂಲಾರವರ ಯುರೋಪ್ ಖಂಡದ ಕೆಲವು ದೇಶಗಳ ಪ್ರವಾಸ ಕೈಗೊಂಡ ಅನುಭವಗಳನ್ನು 'ನನ್ನ ಪ್ರವಾಸ ಕಥನ' ಎಂಬ ಕೃತಿಯಲ್ಲಿ ತಾವು ನೋಡಿದ ದೇಶಗಳ ಬಗ್ಗೆ ಓದಿ, ಕೇಳಿ ಮಾಹಿತಿ ಸಂಗ್ರಹಿಸಿ ಬಹಳ ಶ್ರದ್ಧೆಯಿಂದ ಈ ಪುಟ್ಟ ಪ್ರವಾಸ ಕಥನವನ್ನು ಲೇಖಕಿ ಬರೆದಿದ್ದಾರೆ. "ಅವರ ಆಸಕ್ತಿ ಹಾಗೂ ಕುತೂಹಲ ಈ ಪ್ರವಾಸ ಕಥನದಲ್ಲಿ ತೆರೆದುಕೊಂಡಿದೆ. ಸಂಸ್ಕಾರಗೊಂಡ ಕಣ್ಣು ಹಾಗೂ ಮನ ಖುಷಿಯಿಂದ ತೆರೆದುಕೊಳ್ಳುವುದರಿಂದ ಪ್ರವಾಸಿ ಕಥನ ಎಲ್ಲೂ ಬೇಸರ ತರಿಸುವುದಿಲ್ಲ."[2]

ಡಾ.ಎಸ್.ಎಂ. ಮಹೇಶ್ವರಯ್ಯನವರ 'ಬೆಳಕಿನ ನಾಡಿನಲ್ಲಿ' ಒಂದು ಯುರೋಪ್ ಪ್ರವಾಸ ಕಥನ, ಇದರಲ್ಲಿ ಅವರ ಅನುಭವಗಳನ್ನು ದಾಖಲಿಸಿದ್ದಾರೆ. ಗುರುಮೂರ್ತಿ ಪೆಂಡಕೂರರ 'ಓ! ಕೆನಡಾ' ಆ ದೇಶದಲ್ಲಿ ಸುತ್ತಾಡಿದಾಗ ಒದಗಿ ಬಂದ ಅನುಭವಗಳ ಕಥನ. ಇದು ಒಂದು ಪುಟ್ಟ ಪ್ರವಾಸ ಕಥನ.

ಬಿಳಿಗರೆ ರಾಮಚಂದ್ರರಾಯರು 'ನಾನು ಕಂಡ ರಷ್ಯಾ' ಎಂಬ ಕೃತಿಯಲ್ಲಿ ಸೋವಿಯತ್ ರಷ್ಯಾ, ಫಿನ್ಲೆಂಡ್‌ಗಳನ್ನು ಸುತ್ತಾಡಿ ಕನ್ನಡದಲ್ಲಿ ರಷ್ಯಾ ದೇಶದ ಬಗ್ಗೆ ಬರೆದ ಕೃತಿಯಾಗಿದೆ. ಪ್ರವಾಸವನ್ನು ಯಾವ ಕಾರಣಕ್ಕೆ ಕೈಗೊಳ್ಳಬೇಕು. ಪ್ರವಾಸದಿಂದ ಆಗುವ ಪ್ರಯೋಜನಗಳ ಬಗ್ಗೆ

[2] ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೭೯.

ಲೇಖಕರು ತಿಳಿಸುತ್ತಾರೆ. "ದೇಶ ಪರ್ಯಟನೆಯು ಜ್ಞಾನಾರ್ಜನೆಗೆ ಒಂದು ಸಾಧನ. ಪರದೇಶಗಳನ್ನು ತಿರುಗಿ ಬಂದ ಮೇಲೆ ಆ ದೇಶಗಳ ಸ್ಥಿತಿಗತಿಗಳನ್ನು ಬರೆದಿಡುವುದು ಮೊದಲಿನಿಂದಲೂ ಬಂದ ಪದ್ಧತಿ. ಇದಲ್ಲದೆ ನಮ್ಮ ದೇಶದ ಸ್ಥಿತಿಗತಿಗಳಿಗೂ ಮತ್ತು ಆ ದೇಶದ ಸ್ಥಿತಿಗತಿಗಳಿಗೂ ಇರುವ ಹೋಲಿಕೆ. ವ್ಯತ್ಯಾಸ, ಆ ದೇಶಗಳ ಪ್ರೇಕ್ಷಣೀಯ ಸ್ಥಳಗಳು ಮತ್ತು ವಸ್ತುಗಳು ಇವುಗಳೆಲ್ಲದರ ವಿಷಯವಾಗಿ ನಮ್ಮ ದೇಶದ ಜನಗಳೂ ಈಗಿನ ಸಂದರ್ಭದಲ್ಲಿ ಇನ್ನೂ ಹೆಚ್ಚಾಗಿ ತಿಳಿಯುವುದು ಅವಶ್ಯಕವೆಂಬುದೇ ಉದ್ದೇಶವಾಗಿದೆ."[೮]

ದೇಜಗೌರವರ 'ವಿದೇಶದಲ್ಲಿ ನಾಲ್ಕುವಾರ' ಕೃತಿಯು ದೇಜಗೌರವರು ಜರ್ಮನಿ, ರಷ್ಯಾ, ಅಸ್ಟ್ರಿಯಾ, ಇಂಗ್ಲೆಂಡ್ ಈ ದೇಶಗಳಲ್ಲಿ ಪ್ರವಾಸವನ್ನು ಮಾಡಿ ಅಲ್ಲಿನ ಅನುಭವಗಳನ್ನು ಕೃತಿಯಲ್ಲಿ ತಿಳಿಸಿದ್ದಾರೆ. "ಜ್ಞಾನಾಭಿವೃದ್ಧಿಯ ದೃಷ್ಟಿಯಿಂದ ಅನುಭವ ಸಂಪಾದನೆಯ ಕೋನದಿಂದ ರಾಷ್ಟ್ರ ಪ್ರಗತಿಯ ನಿಮಿತ್ತದಿಂದ ಪ್ರವಾಸ ಅತ್ಯಗತ್ಯ. ನಮ್ಮ ಜನ ಪ್ರಪಂಚದ ಮುಂದುವರಿದ ರಾಷ್ಟ್ರಗಳಿಗೆ ಮೇಲಿಂದ ಮೇಲೆ ಹೋಗಬೇಕು. ಅಲ್ಲಿಯ ವಿದ್ಯಮಾನಗಳನ್ನು ಗ್ರಹಿಸಬೇಕು. ಅಭಿವೃದ್ಧಿ ಕಾರ್ಯಗಳನ್ನು ಗಮನಿಸಬೇಕು. ಅಲ್ಲಿಯ ಪ್ರತಿಭಾವಂತ ತಜ್ಞರೊಡನೆ ವಿಚಾರ ವಿನಿಮಯ ಮಾಡಬೇಕು. ಸ್ವದೇಶಕ್ಕೆ ಹಿಂತಿರುಗಿದ ಮೇಲೆ ತಾವು ಕಲಿತಿದ್ದನ್ನು ದೇಶದ ಆರೋಗ್ಯಕ್ಕೆ ಅನುಕೂಲವಾದದ್ದನ್ನು ಕಾರ್ಯರೂಪಕ್ಕೆ ತರಬೇಕು" ಎಂಬ ದೇ.ಜ.ಗೌರವರ ಮಾತು ಪ್ರವಾಸ ಮಾಡುವುದರ ಜೊತೆಗೆ ಅದರ ಉದ್ದೇಶ ಮತ್ತು ಕರ್ತವ್ಯಗಳನ್ನು ತಿಳಿಸುತ್ತದೆ.

ದೇ.ಜ.ಗೌ.ರವರು ರಷ್ಯಾ ಪ್ರವಾಸದಲ್ಲಿ ಆ ದೇಶದ ಜನರ ಶಿಸ್ತು, ದೇಶಾಭಿಮಾನ, ಭಾಷಾಭಿಮಾನಗಳನ್ನು, ಕಲಾ ಪ್ರೇಮವನ್ನು ಕಂಡು ಸಂತೋಷಗೊಂಡಿರುವರು. ಆ ಸಂದರ್ಭದಲ್ಲೇ "ನಮ್ಮಲ್ಲಿ ಇವು ಇಲ್ಲದಿರುವುದರ ಬಗ್ಗೆ ನಿಟ್ಟುಸಿರುಗರೆದಿರುವರು ಅಲ್ಲಿನ ಜನರ ಪ್ರಾಮಾಣಿಕತೆ ದುಡಿಮೆಯ ಬಗೆಗಿನ ಮನದಾಳದ ಪ್ರೀತಿ, ವೈಜ್ಞಾನಿಕ ಪ್ರಗತಿ, ಜೀವನ ಶ್ರದ್ಧೆ ಇವನ್ನು ಗಮನಿಸುತ್ತಿದ್ದಂತೆಯೇ ಇವು ನಮ್ಮ ಜನರಲ್ಲಿ ಇಲ್ಲವಲ್ಲಾ ಎಂಬ ನಿರಾಶೆಯೂ ಅವರಿಗೆ ಉಂಟಾಗಿದೆ, ರಷ್ಯಾದ ಸಂಶೋಧನೆಯಲ್ಲಿ ಸಂಶೋಧಕ ವಿದ್ವಾಂಸರು ಸಂಶೋಧನೆಯಲ್ಲಿ ತೊಡಗಿಸುವ ಆಸಕ್ತಿ, ತೋರುವ ಪರಿಶ್ರಮ, ಅವರ ಆಳವಾದ ವ್ಯಾಸಂಗ ; ಸಮರ್ಪಣಾಭಾವ ;

[೮] ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೮೬.

ಪ್ರಾಮಾಣಿಕತೆ : ಕಲಾಭಿಮಾನ : ಮೈದಣಿಯುವಂತೆ ದುಡಿಯುವ ಅವರ ಕಾಯಕನಿಷ್ಠೆ" ಇವುಗಳ ಬಗ್ಗೆ ದೇಜಗೌ ರವರ ನೆನಪಿನಲ್ಲಿ ಉಳಿಯುವ ವಿವರಣೆ ನೀಡಿದ್ದಾರೆ.

ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ ಡಾ.ಜಿ.ಎಸ್. ಶಿವರುದ್ರಪ್ಪನವರು ತಮ್ಮ ೨೨ ದಿನಗಳ ಮಾಸ್ಕೋ ದೇಶದ ಪ್ರವಾಸವನ್ನು ಅವರು ದಿನಚರಿ ರೂಪದಲ್ಲಿ ಕೊಟ್ಟಿದ್ದಾರೆ. ಈ ಕೃತಿಯಲ್ಲಿ ಅಲ್ಲಿನ ಜನರ ಅವರಿಗಾದ ಅಪರಿಚಿತತೆಯ ಅನುಭವ. ಅಲ್ಲಿನ ಜನರೊಂದಿಗೆ ವ್ಯವಹರಿಸಿದ ರೀತಿ ಇವುಗಳ ಬಗ್ಗೆ ತಮ್ಮ ಅನಿಸಿಕೆಗಳನ್ನು ಈ ಕೃತಿಯಲ್ಲಿ ಪಡಿಮೂಡಿಸಿದ್ದಾರೆ.

ಈ ಕೃತಿಯಲ್ಲಿ ಲೇಖಕರು ರಷ್ಯಾ ದೇಶದ ಜನಜೀವನ ಶೈಲಿ. ಅಲ್ಲಿನ ಶುಚಿಯಾದ ನಾಗರೀಕ ಜೀವನ. ಅವರ ಸಾಂಸ್ಕೃತಿಕ ಪರಿಸರ. ತಮ್ಮ ಕಲೆಗಳ ಬಗ್ಗೆ ಇರುವ ತೀವ್ರವಾದ ಆಸಕ್ತಿ, ಅಭಿಮಾನ, ಹಿರಿಯ ವ್ಯಕ್ತಿಗಳನ್ನು ಗೌರವಿಸುವ ರೀತಿ ಇವುಗಳನ್ನು ಕೃತಿಯಲ್ಲಿ ಲೇಖಕರು ತಿಳಿಸುತ್ತಾರೆ. "ಕವಿಮನದ ಭಾವಪೂರ್ಣ ಶೈಲಿ ಅರ್ಥಗರ್ಭಿತ ಮಾತುಗಳಲ್ಲಿ ತೊಯ್ದು ಬರುವುದರಿಂದ ಪ್ರವಾಸ ಕಥನವು ಮನಸ್ಸಿಗೆ ಮುದಕೊಡುತ್ತದೆ. ನಿಲ್ಲದೆ ಓದಿಸಿಕೊಂಡು ಹೋಗುತ್ತದೆ. ಉತ್ತಮ ಪ್ರವಾಸ ಕಥನಕ್ಕೆ ಈ ಕೃತಿ ಯೋಗ್ಯ ಮಾದರಿಯಾಗಿದೆ".[೧೦]

'ಸುಂದರ ಮಾಸ್ಕೊ ಸುಂದರ ರಸಿಯ' ಎಂಬ ಪ್ರವಾಸ ಕೃತಿಯನ್ನು ಎಚ್.ಎಸ್. ಹರಿಶಂಕರ್‌ರವರು ರಚಿಸಿದ್ದಾರೆ. ಇದು ರಷ್ಯಾ ದೇಶದ ಪ್ರವಾಸ ಕಥನವಾಗಿದೆ. ಸೋವಿಯತ್ ಜನರ ಶ್ರಮಪೂರ್ಣ ದುಡಿಮೆಯಿಂದಾದ ಮಹತ್ಸಾಧನೆಯ ಪರಿಚಯ ಈ ಪ್ರವಾಸ ಕಥನದಿಂದಾಗುತ್ತದೆ. ಜನರ ನೈರ್ಮಲ್ಯ ಪಾಲನೆ, ದುಬಾರಿಯಲ್ಲದ ಬಸ್, ರೈಲು, ಮೆಟ್ರೋ ಸಂಚಾರ, ಮಾಸ್ಕೋ ವಿಶ್ವವಿದ್ಯಾಲಯದಲ್ಲಿ ಶಿಸ್ತಿನ ವಿದ್ಯಾರ್ಥಿ ಜೀವನ, ಕಮ್ಯುನಿಷ್ಟ್ ಸಿದ್ಧಾಂತಗಳಿಗೆ ಜನಬದ್ಧರಾಗಿದ್ದರೂ ಜೀವನವನ್ನು ಆಹ್ಲಾದಮಯವಾಗಿ ಕಳೆಯುವ ರೀತಿ. ಸಾಹಿತ್ಯ-ಕಲೆಗಳಿಗೆ ಕೊಡುವ ಪ್ರೋತ್ಸಾಹ ಇವು ಪ್ರವಾಸ ಕಥನದಲ್ಲಿ ಕಂಡುಬರುವ ವಿಚಾರಗಳಾಗಿವೆ.

ಹೀಗೆ ಕನ್ನಡದಲ್ಲಿ ರಷ್ಯಾ ದೇಶವನ್ನು ಕುರಿತು ಅನೇಕ ಕೃತಿಗಳು ಬಂದಿವೆ. ರಷ್ಯಾ ದೇಶದ ಪ್ರವಾಸ ಕೈಗೊಂಡ ಲೇಖಕರು. ಆ ದೇಶದ ಜನರ ಬದುಕು, ಅಲ್ಲಿನ ಸಂಸ್ಕೃತಿ, ಸಾಮಾಜಿಕ ಪರಿಸರ ಕುರಿತ ಅನೇಕ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ರಚನೆಯಾಗಿವೆ. ಪ್ರವಾಸಕ್ಕಾಗಿ ಅಮೆರಿಕಾಕ್ಕೆ

---

[೯] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೮೮.

ಹೋದವರು, ಸಭೆ–ಸಮಾರಂಭಗಳಲ್ಲಿ ಭಾಗವಹಿಸಿದವರು. ಅಮೆರಿಕಾದ ಜನರ ಜೀವನ ವಿಧಾನಗಳು, ಅವರ ಶ್ರೀಮಂತ ಜೀವನ, ಭೋಗವಿಲಾಸಮಯ ಬದುಕು, ಸ್ವಚ್ಛಂದದ ನಡತೆ, ಅಲ್ಲಿನ ಅವರ ಯಾಂತ್ರಿಕ ಬದುಕಿನ ಬವಣೆಗಳನ್ನು ಮತ್ತು ಅವರ ಆರ್ಥಿಕ ಸ್ಥಿತಿಗತಿಗಳನ್ನು ಅಲ್ಲಿ ಪ್ರೇಕ್ಷಣೀಯ ಸ್ಥಳಗಳ ವಿವರಣೆಯನ್ನು ತಮ್ಮ ಕೃತಿಯಲ್ಲಿ ಅನೇಕ ಲೇಖಕರು ಪಡಿಮೂಡಿಸಿದ್ದಾರೆ.

ಅಮೆರಿಕ ಸಂಯುಕ್ತ ಸಂಸ್ಥಾನಗಳನ್ನು ಹೊಸದಾಗಿ ನೋಡಲು ಅಥವಾ ಕಲಿಯಲು ಹೋಗುವವರಿಗೆ ಸಹಾಯವಾಗಲಿ ಎಂಬ ಸದುದ್ದೇಶದಿಂದ ಕನ್ನಡದಲ್ಲಿ ಎರಡು ಕೃತಿಗಳು ಬಂದಿವೆ. ಮೊದಲನೆಯದು 'ಸಂಯುಕ್ತ ಸಂಸ್ಥಾನಗಳು ಪರಿಚಯ ಮಾಡಿಕೊಳ್ಳಿ' ಎಂಬುದು ನ್ಯೂಯಾರ್ಕಿನ ಅಂತರಾಷ್ಟ್ರೀಯ ಶಿಕ್ಷಣ ಪ್ರತಿಷ್ಠಾನದವರು ಪ್ರಕಟಿಸಿರುವ Meet the U.S.A ಎಂಬ ಆಂಗ್ಲಗ್ರಂಥದ ಕನ್ನಡರೂಪ. ಇದನ್ನು ಕನ್ನಡಿಸಿರುವವರು ಪ್ರೊ.ಜಿ. ವೆಂಕಟಸುಬ್ಬಯ್ಯ ರವರು. ಅಮೆರಿಕಾ ಸಂಯುಕ್ತ ಸಂಸ್ಥಾನಗಳಿಗೆ ಬೇರೆ ಬೇರೆ ಕಾರಣಗಳಿಂದ ಬರುತ್ತಿರುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದ್ದು, ಅಂತಹವರಿಗೆ ಅದರ ಸಾಮಾನ್ಯ ಪರಿಚಯ ಮಾಡಿಕೊಡುವ ಅಗತ್ಯವಿದ್ದು, ಆ ಉದ್ದೇಶದಿಂದಲೇ ಇದನ್ನು ಹೊರತರಲಾಗಿದೆ. ಎರಡನೆಯದು 'ಇಂದಿನ ಅಮೆರಿಕ' ಇದನ್ನು ಮದರಾಸಿನ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯವರು ಹೊರತಂದಿರುವರು. ಪ್ರೊ. ಶ್ರೀಪತಿ ಶ್ರೀದೇವಿಯವರ ಮೂಲ ಕೃತಿಯನ್ನು ಕನ್ನಡಿಸಿರುವವರು ಎಂ.ವಿ. ಶ್ರೀನಿವಾಸರವರು. ಇದರಲ್ಲಿ ಅಮೆರಿಕಾದ ಐತಿಹಾಸಿಕ ಹಿನ್ನೆಲೆ, ಸಂಪ್ರದಾಯ ಮತ್ತು ಸಂಸ್ಕೃತಿ, ಶಿಕ್ಷಣ ವ್ಯವಸ್ಥೆ, ಮತ–ಧರ್ಮ, ಜನತೆ, ಸಾಮುದಾಯಿಕ ಸಂಪರ್ಕ ಸಾಧನೆ. ಇದನ್ನು ಕ್ರಮವಾಗಿ ತಿಳಿಸಿದ್ದು ಈ ಕೃತಿಯು ಅಮೆರಿಕಾ ದೇಶದ ಸ್ಥೂಲ ಪರಿಚಯ ಮಾಡಿಕೊಡುತ್ತದೆ.

'ಅಮೆರಿಕಾಯಣ'ವು ಪ್ರೊ. ವೈ.ಆರ್. ಮೋಹನ್‌ರವರು ಬರೆದಿರುವ ಅಮೆರಿಕೆಯ ಪ್ರವಾಸ ಕಥನವಲ್ಲ ಅದು ಅಮೆರಿಕ ಸಂಯುಕ್ತ ಸಂಸ್ಥಾನಗಳ ಸಂಕ್ಷಿಪ್ತ ಇತಿಹಾಸವನ್ನು ವಿವರಿಸುವ ಹೆಬ್ಬೊತ್ತಿಗೆ "ವೈ.ಆರ್. ಮೋಹನ್ ಅಮೇರಿಕದ ಇತಿಹಾಸವನ್ನು ಕನ್ನಡದಲ್ಲಿ ಸರಳವಾದ ಕಥನ (Narrative) ಶೈಲಿಯಲ್ಲಿ ಬರೆದಿರುವರು. ಬಹುಶಃ ಅಮೆರಿಕಾದ ಇತಿಹಾಸವನ್ನು ಭಾರತದಿಂದ ಹೋಗಿ ನೆಲಸಿ ಲೇಖಕರು ಬರೆದಿರುವುದರಿಂದ ಇದಕ್ಕೊಂದು ವಿಭಿನ್ನ ದೃಷ್ಟಿಕೋನ ಪ್ರಾಪ್ತವಾಗಿದೆ."[೨೨] ಅಮೇರಿಕವನ್ನು ಕಂಡದ್ದು, ಗ್ರಹಿಸಿದ್ದು, ಭಾರತೀಯವಾದ ಕಣ್ಣು, ಮನಸ್ಸು, ಪರಸ್ಪರ ವಿರುದ್ಧವಾದ ಎರಡು ಸಂಸ್ಕೃತಿಗಳ ಸಂಘರ್ಷದ ಹಿನ್ನೆಲೆ ಈ

[೨೨] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೯೨.

[೨೩] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ. ಪು. ೨೭೦.

ಕೃತಿಗಿರಬೇಕಾಗಿತ್ತು. ಆದರೆ ಅದು ಬಂದಿಲ್ಲ. ಕಾರಣ ಅಮೇರಿಕದ ಎರಡು ಶತಮಾನಗಳ ಗತ ಇತಿಹಾಸವನ್ನು ಸರಳವಾಗಿ ನಿರೂಪಣೆ ಮಾಡುವುದು ಅಮೇರಿಕದ ಇತಿಹಾಸ ತಿಳಿಯಬೇಕೆನ್ನುವವರಿಗೆ ಒಂದು ಅಧಿಕೃತ ಪಠ್ಯವನ್ನು ಒದಗಿಸುವುದು ಮೋಹನ್‌ರವರ ಉದ್ದೇಶ ಈ ಕೃತಿಯಲ್ಲಿ ಸಾಫಲ್ಯಗೊಂಡಿದೆ.

'ಕೋಲಂಬಿಯಾ ಯಾತ್ರೆ' ವೈ.ಎಸ್. ಲೂಯಿಸ್‌ರವರ ಕೃತಿ. ಭಾರತ ಸರ್ಕಾರದ ವಿದ್ಯಾರ್ಥಿ ವೇತನ ಪಡೆದು ಮಾಡಿದ ಅಮೆರಿಕಾ ಯಾತ್ರೆಯನ್ನು ತಮ್ಮ ಆಪ್ತಮಿತ್ರರಿಗೆ ಬರೆದ ೧೯ ಪತ್ರಗಳ ಸಾರವೇ ಈ ಕೃತಿ. ಪತ್ರ ರೂಪದಲ್ಲಿರುವ ಅವರ ಅಮೆರಿಕಾದ ಅನುಭವಗಳು ಸ್ವಾರಸ್ಯಪೂರ್ಣವಾಗಿವೆ. ಚುರುಕಿನ ವಿಷಯ ನಿರೂಪಣೆ ಈ ಕೃತಿಯ ವೈಶಿಷ್ಟ್ಯಗಳಲ್ಲೊಂದು.

ನಾಡಿಗ ಕೃಷ್ಣಮೂರ್ತಿಯವರ 'ಸಾಗರದಾಚೆ'ಯು ಹೆಚ್ಚಿನ ಶಿಕ್ಷಣಕ್ಕೆಂದು ಅಮೆರಿಕಾಕ್ಕೆ ತೆರಳಿದ ಅವರ ಅನುಭವ ಕಥನವಾಗಿದೆ. ಅಮೇರಿಕೆಯನ್ನು ಕುರಿತು ಬಂದ ಗ್ರಂಥಗಳಲ್ಲಿ ಬಿ.ಜಿ.ಎಲ್.ಸ್ವಾಮಿಯವರ 'ಅಮೆರಿಕಾದಲ್ಲಿ ನಾನು' ಎಂಬುದು ಅತ್ಯುತ್ತಮ ಗ್ರಂಥ "ಸ್ವಾಮಿಯವರು ಸಸ್ಯಶಾಸ್ತ್ರದಲ್ಲಿ ಸಂಶೋಧನೆ ನಡೆಸಲು ಅಮೇರಿಕೆಗೆ ಹೋಗಿ ಆರು ವರ್ಷಗಳ ಕಾಲ ಅಲ್ಲಿದ್ದು, ಅಲ್ಲಿನ ಜನಜೀವನ, ಸಂಸ್ಕೃತಿ, ವ್ಯವಹಾರ, ಸ್ವಧರ್ಮ ಹಾಗೂ ಭಾರತೀಯ ಮತ್ತು ಅಮೇರಿಕೆಯ ಜೀವನದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಕುರಿತು ಇಲ್ಲಿ ಬರೆಯುತ್ತಾರೆ."[೨] ಈ ಕೃತಿಯಲ್ಲಿ ಲೇಖಕರು ಮನುಷ್ಯ ಸ್ವಭಾವ ಒಂದೇ ಅಮೆರಿಕಾದಲ್ಲಿ ಬೇರೆಯಲ್ಲ. ಇಂಡಿಯಾದಲ್ಲಿ ಬೆರೆಯಲ್ಲ ಎಂಬ ಸ್ವಭಾವ ವರ್ತನೆಗಳನ್ನು ಕುರಿತು ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಹೀಗೆ ಅಮೆರಿಕಾ ಮತ್ತು ಭಾರತದ ಜನರ ನಡೆ-ನುಡಿಗಳ ಬಗ್ಗೆ ವಿವರವಾಗಿ ತಿಳಿಸುತ್ತಾರೆ. ಅಮೆರಿಕಾದ ಜನರ ಹುಚ್ಚಾಟ ಅವರ ಅತಿರೇಕದ ವರ್ತನೆಗಳನ್ನು ಹಾಸ್ಯವಾಗಿ ಓದುಗನಿಗೆ ತಿಳಿಸುತ್ತಾರೆ. ಈ ವಿಚಾರಗಳನ್ನು ಓದುವ ಓದುಗ ನಗೆಗಡಲಲ್ಲಿ ಮಿಂದೇಳುತ್ತಾನೆ. ಎ.ಎನ್. ಮೂರ್ತಿರಾಯರ 'ಅಪರ ವಯಸ್ಕನ ಅಮೆರಿಕಾ ಯಾತ್ರೆ' ಪ್ರವಾಸ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯಾಗಿದೆ.

ಶ್ರೀಮತಿ ಲಲಿತ ಸುಬ್ಬರಾವ್‌ರವರು ತಮ್ಮ ಅಮೇರಿಕದ ಅನುಭವಗಳನ್ನು 'ನಾನು ಮತ್ತು ಅಮೇರಿಕ' ಎಂಬ ಕೃತಿಯಲ್ಲಿ ಕೊಟ್ಟಿದ್ದಾರೆ. ಅಮೇರಿಕದ ಜನರ ಸೌಜನ್ಯ, ಧಾರಾಳಗುಣ, ಸ್ನೇಹ ಪ್ರಿಯತೆ ಇತ್ಯಾದಿಗಳಿಗೆ ಮನಸೋತ ಲೇಖಕಿ ತಮ್ಮ ಪ್ರವಾಸದಲ್ಲಿ ಕಂಡುಂಡ ಈ ವಿಶೇಷ ಗುಣಗಳನ್ನು ಮನಸಾರೆ ಹೊಗಳಿರುವರು. 'ಅಮೇರಿಕದಲ್ಲಿ ಅರವತ್ತು ದಿನಗಳು' ಶ್ರೀ.ಕೆ.

ಗಣೇಶರವರ ಅಮೇರಿಕ ಮತ್ತು ಕೆನಡಾ ದೇಶಗಳಲ್ಲಿ ಪ್ರವಾಸ ಮಾಡಿ ಪಡೆದ ಅನುಭವಗಳನ್ನು ಕೃತಿಯಲ್ಲಿ ಹೇಳಿದ್ದಾರೆ. ಅಮೇರಿಕನ್ನರ ಅತಿಯೆನಿಸುವ ವಿಲಾಸಿ ಜೀವನ, ತಮದೇಯಾದ ಪ್ರಾಚೀನ ಸಂಸ್ಕೃತಿಯಲ್ಲಿದ ಈ ಜನ ಭಾರತದತ್ತ ಆಸಕ್ತಿ ಪೂರ್ಣ ದೃಷ್ಟಿ ಹರಿಸಿರುವುದನ್ನು ಭಾರತೀಯ ಧರ್ಮ ಹಾಗೂ ವೇದಾಂತಗಳ ಬಗೆಗೆ ತೀವ್ರವಾದ ಆಸಕ್ತಿ ಮೈಗೂಡಿಸಿಕೊಂಡಿರುವುದನ್ನು ಲೇಖಕರು ಕೃತಿಯಲ್ಲಿ ವಿವರಿಸಿದ್ದಾರೆ. ಶ್ರೀ ಬಿ.ವಿ. ರಾಮನ್‌ರವರು ಇಂಗ್ಲಿಷ್‌ನಲ್ಲಿ ಬರೆದಿರುವ 'ಅಮೇರಿಕದಲ್ಲಿ ಓರ್ವ ಹಿಂದು' ಎಂಬ ಗ್ರಂಥವನ್ನು ಶ್ರೀ. ಎನ್.ಎಸ್. ಸೀತಾರಾಮಶಾಸ್ತ್ರಿಯವರು ಕನ್ನಡಕ್ಕೆ ಅನುವಾದಿಸಿರುವರು. "ಈ ಪ್ರವಾಸ ಕೃತಿ ಸಾಹಿತ್ಯವಾಗಿ ನಮ್ಮನ್ನು ಅಷ್ಟಾಗಿ ಆಕರ್ಷಿಸುವುದಿಲ್ಲ. ಜ್ಯೋತಿಶಾಸ್ತ್ರದ ಬಗ್ಗೆ ನಂಬುಗೆ ಶ್ರದ್ಧೆಯುಳ್ಳವರಿಗೆ ಇದು ರುಚಿಯಾಗುತ್ತದೇನೋ! ಅನುವಾದ ಮೂಲಾನುಸಾರಿಯಾಗಿ ಬಂದಿದ್ದು ಓದಿಸಿಕೊಂಡು ಹೋಗುತ್ತದೆ."[೧೩]

'ಅಪೂರ್ವ ಪಶ್ಚಿಮ' ಮತ್ತು 'ಪಾತಾಳಕ್ಕೆ ಪಯಣ' ಇವೆರಡೂ ಶ್ರೀ ಶಿವರಾಮ ಕಾರಂತರ ಅಮೆರಿಕಾ ಮತ್ತು ಯುರೋಪ್ ದೇಶಗಳ ಪ್ರವಾಸ ಕಥನ 'ಪಾತಾಳಕ್ಕೆ ಪಯಣ'ದಲ್ಲಿ ಅಮೆರಿಕಾವನ್ನು ತಮ್ಮ ಬೆರಗುಗಣ್ಣಿನಿಂದ ನೋಡಿ, ಕುತೂಹಲಗೊಂಡು ಇಲ್ಲಿ ನೋಡಲು ಬೇಕಾದಷ್ಟು ಸ್ಥಳಗಳಿವೆ. ಆದರೆ ಅದಕ್ಕೆ ಮುಖ್ಯವಾಗಿ ಹಣದ ಒತ್ತಾಸೆಯಿರಬೇಕು ಎಂಬುದನ್ನು ತಿಳಿಸುತ್ತಾರೆ. ಕಾರಂತರು ತಮ್ಮ ಪ್ರವಾಸ ಕಾಲದಲ್ಲಿ ತಮ್ಮ ಆಸಕ್ತಿಯ ಕ್ಷೇತ್ರಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆದುಕೊಂಡಿದ್ದಾರೆ. ಅಮೆರಿಕಾ ದೇಶವನ್ನು ನೋಡಿ ತಿಳಿಯಬೇಕು. ಸಂತೋಷಪಡಬೇಕು ಎಂಬ ಬಯಕೆಯಿಂದ ಅವರು ತಮಗಾದ ಅನುಭವಗಳನ್ನು ಕೃತಿಯಲ್ಲಿ ಸವಿವರವಾಗಿ ತಿಳಿಸಿದ್ದಾರೆ. ಅವರ ಪ್ರವಾಸದ ಅನುಭವಗಳನ್ನು ಓದಿದಾಗ ನಮ್ಮ ಬದುಕಿಗೆ ಮತ್ತು ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸಹಾಯಕವಾಗುತ್ತದೆ. ನಾವು ನಮ್ಮ ಸೀಮಿತ ಪರಿಧಿಯನ್ನು ಮೀರಿ, ವಿಶಾಲ ಮನೋಭಾವವನ್ನು ಬೆಳೆಸಿಕೊಳ್ಳಲು ಸಹಾಯಕವಾಗುತ್ತದೆ. ಹೀಗೆ ಪ್ರವಾಸದ ಮೂಲಕ ಮತ್ತು ಪ್ರವಾಸ ಸಾಹಿತ್ಯವನ್ನು ಓದಿದಾಗ ನಮ್ಮ ಜ್ಞಾನದ ಮಟ್ಟ ಹೆಚ್ಚಾಗುತ್ತದೆ. ಮತ್ತು ನಮ್ಮ ಅನುಭವ ಪ್ರಪಂಚವನ್ನು ವಿಶಾಲಗೊಳಿಸಿಕೊಳ್ಳಲು ಸಹಾಯಕವಾಗುತ್ತದೆ ಎಂಬ ಮನೋಭಾವನೆ ಅವರ ಕೃತಿಯನ್ನು ಓದಿದಾಗ ಓದುಗನಾಗುತ್ತದೆ.

---

[೧೨] ಕನ್ನಡ ವಿಶ್ವಕೋಶ, ಸಂಪುಟ – .೩ ಪು. ೭೪೨.
[೧೩] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೨೮೫.

ಅಮೆರಿಕಾ ಪ್ರವಾಸ ಸಾಹಿತ್ಯದಲ್ಲಿ ಡಾ. ಪ್ರಭುಶಂಕರರವರ "ಅಮೆರಿಕಾದಲ್ಲಿ ನಾನು ಮತ್ತು ಶಾಂತಿ" ಮುಖ್ಯವಾದ ಕೃತಿಯಾಗಿದೆ. ಪ್ರಭುಶಂಕರ ದಂಪತಿಗಳು ಅಮೆರಿಕಾದ ಪ್ರವಾಸದ ಅನುಭವಗಳನ್ನು ಹೇಳುವ ಕೃತಿ, ಲೇಖಕರು ತಮ್ಮ ಕೃತಿ ರಚನೆಯ ಬಗ್ಗೆ ಮೊದಲಿಗೆ ತಿಳಿಸುತ್ತಾರೆ. "ನನಗೆ ಚೆನ್ನಕಂಡದ್ದನ್ನು ನನ್ನ ಜನರಿಗೆ ತಿಳಿಸಬೇಕೆನ್ನುವ ಆಸೆ ನನ್ನದು. ನಾನು ಅಮೆರಿಕೆಯವನ್ನು ನೋಡಿದ ರೀತಿ ಅರ್ಥಮಾಡಿಕೊಂಡ ಬಗೆ ಉಳಿದವರಿಗಿಂತ ಬೇರೆಯಾಗಿರುವ ಸಾಧ್ಯತೆ ಇದೆ. ಅದೇನು ಎನ್ನುವುದನ್ನು ನನ್ನ ಕನ್ನಡ ಜನರಿಗೆ ತಿಳಿಯಹೇಳುವ ಉತ್ಸಾಹ ನನ್ನದು. ಆದ್ದರಿಂದ ಈ ಪುಸ್ತಕ ಬರೆಯುತ್ತಿದ್ದೇನೆ"[೧೪] ಎಂದು ಹೇಳುವುದನ್ನು ಗಮನಿಸಿದಾಗ ಲೇಖಕರು ಪ್ರವಾಸದ ಅನುಭವಗಳನ್ನು ಓದುಗರಿಗೆ ತಿಳಿಸಬೇಕೆನ್ನುವ ಹಂಬಲವನ್ನು ಕಾಣಬಹುದಾಗಿದೆ. ಕೃತಿಯಲ್ಲಿ ಪ್ರವಾಸ ಕಥನವು ದಿನಚರಿ ರೂಪದಲ್ಲಿದ್ದು, ಅನೇಕ ಸ್ವಾರಸ್ಯಕರವಾದ ವಿವರಗಳನ್ನು ಕೃತಿ ಒದಗಿಸುತ್ತದೆ.

ಡಾ. ಪ್ರಭುಶಂಕರ ಅವರ ಈ ಪ್ರವಾಸ ಕಥನ ವಿಚಾರ ಪ್ರಚೋದಕವಾಗಿದೆ. ಹಾಗೆಯೇ ಬೋಧಪ್ರದವೂ ಆಗಿದೆ. ಅವರು ಪ್ರೇಕ್ಷಣೀಯ ಸ್ಥಳಗಳನ್ನು ಪ್ರವಾಸಿ ಆಗಿ ನೋಡುವುದಕ್ಕಿಂತ ಅಮೇರಿಕನ ಸಮಾಜವನ್ನು ಬಹಳ ಹತ್ತಿರದಿಂದ ನೋಡುವುದರಲ್ಲಿ ಹೆಚ್ಚು ಆಸಕ್ತಿ ತೋರಿರುವರು. "ಪ್ರವಾಸ ಕಥನ ವರ್ಣನಾತ್ಮಕವಾದುದು ಹಾಗೆಯೇ ಶೈಕ್ಷಣಿಕವಾದುದು. ಒಳ್ಳೆಯ ಪ್ರವಾಸ ಕಥನದಲ್ಲಿ ಅವೆರಡೂ ಅವಿಭಾಜ್ಯ ಘಟಕಗಳಾಗಿ ಬರಬೇಕು. ಡಾ. ಪ್ರಭುಶಂಕರ ಅವರ ಪ್ರವಾಸ ಕಥನದಲ್ಲಿ ಅವೆರಡು ಪರಸ್ಪರ ಪೂರಕವಾಗಿ ಬಂದಿವೆ. ಪುಸ್ತಕ ಓದಿ ಮುಗಿಸಿದ ಮೇಲೂ ಓದುಗನನ್ನು ಪ್ರಸ್ತಾಪಿತ ವಿಷಯಗಳ ಬಗೆಗೆ ಆಲೋಚನೆ ಮಾಡುವಂತೆ ಪ್ರೇರೇಪಿಸುವುದು ಒಳ್ಳೆಯ ಬರಹದ ಲಕ್ಷಣ. ಅಂತಹ ಒಳ್ಳೆಯ ಬರಹವನ್ನು ನಾವಿಲ್ಲಿ ಕಾಣುತ್ತೇವೆ."[೧೫]

"ಅಮೆರಿಕಾದಲ್ಲಿ ಗೊರೂರು" ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರರವರ ಅಮೇರಿಕ ಕೆನಡ ಪ್ರವಾಸಾನುಭವವನ್ನು ತಿಳಿಸುವ ಕೃತಿಯಾಗಿದೆ. ಗೊರೂರು ಲೇಖಕರು ಅವರ ಕೃತಿಗಳಲ್ಲಿ ಹಾಸ್ಯದ ಹೊನಲನ್ನು ಕಾಣಬಹುದು. ಕೃತಿಯಲ್ಲಿ ವಿಶಿಷ್ಟ ಶೈಲಿಯ ಹಾಸ್ಯ ಮಿಶ್ರಿತವಾಗಿರುವುದನ್ನು ಕಾಣಬಹುದು.

---

[೧೪] ಡಾ. ಪ್ರಭುಶಂಕರ್, ಅಮೆರಿಕಾದಲ್ಲಿ ನಾನು ಮತ್ತು ಶಾಂತಿ.

[೧೫] ಡಾ. ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡ ಪ್ರವಾಸ ಸಾಹಿತ್ಯ, ಪು. ೨೯೫.

'ಅಟ್ಲಾಂಟಿಕ್‌ದಾಚೆಗೆ' ಶ್ರೀಮತಿ ಸುಧಾಮೂರ್ತಿಯವರ ಪ್ರವಾಸ ಕಥನ ತಾವು ಭೇಟಿ ಮಾಡಿದ ಬಾಸ್ಟನ್, ಚಿಕಾಗೋ, ಲಾಸ್ ವೇಗಸ್, ದೇಶಗಳಲ್ಲಿ ಪಡೆದ ಅನುಭವಗಳ ನಿರೂಪಣೆ ಕಾಣಬಹುದು. ಶ್ರೀಮತಿ ನೀಳಾದೇವಿಯವರ 'ನಾ ಕಂಡ ಅಖಂಡ' ದಿನಚರಿ ರೂಪದ ಅಮೆರಿಕಾ ಪ್ರವಾಸ ಕಥನ. ಇವರು ಕನ್ನಡದ ಕಾದಂಬರಿಕಾರರು, ತಾವು ಪಡೆದ ಅನುಭವಗಳನ್ನು ತಿಳಿಹಾಸ್ಯದ ಮೂಲಕ ನಿರೂಪಿಸಿದ್ದಾರೆ. 'ನಾ ಕಂಡ ಅಮೇರಿಕ' ಡಾ. ರಾ.ಯ.ಧಾರವಾಡಕರ ಕೃತಿ, 'ಕುಬೇರ ರಾಜ್ಯದ ಚಿತ್ರ–ವಿಚಿತ್ರ' ರಂಜನಭಟ್ಟರ ಕೃತಿ 'ನಾನೊಬ್ಬ ಭಾರತೀಯ ಪ್ರವಾಸಿ' ವ್ಯಾಸರಾಯ ಬಲ್ಲಾಳರ ಅಮೇರಿಕ ಪ್ರವಾಸ ಕೃತಿಗಳಾಗಿವೆ. ಅಲ್ಲಿ ಪಡೆದ ಅನುಭವಗಳನ್ನು ಓದುಗರಿಗೆ ಮನಮುಟ್ಟುವಂತೆ ತಿಳಿಸಿದ್ದಾರೆ. ಡಾ.ಜಿ.ಎಸ್. ಶಿವರುದ್ರಪ್ಪನವರ ಮೂರನೆಯ ಪ್ರವಾಸ ಕಥನ 'ಅಮೆರಿಕಾದಲ್ಲಿ ಕನ್ನಡಿಗ' ಪ್ರೊ.ವಿ. ಪುಟ್ಟಮಾದಪ್ಪನವರ 'ನೆಮ್ಮೆಗೆಯ ನಾಡು' ನಂಜುಂಡ ಶಾಸ್ತ್ರಿಗಳ 'ಅಮೇರಿಕ ಭಾರತೀಯನ ದೃಷ್ಟಿಯಲ್ಲಿ', ಶ್ರೀ ಕೆ.ಎನ್.ಕೃಷ್ಣಮೂರ್ತಿಯವರ 'ಅಮೆರಿಕಾ ಪ್ರವಾಸದ ಅನುಭವಗಳು', ಡಾ॥ ಹೊ. ಶ್ರೀನಿವಾಸಯ್ಯನವರ 'ಜಯಶ್ರೀ ಕಂಡ ಅ ಅಮೇರಿಕ', ಶ್ರೀಮತಿ ಜಯಾ ರಾಜಶೇಖರ್‌ರವರ 'ಮರಳಿ ಬಂದ ಮಧುಮಾಸ', ಕುಲಶೇಖರಿಯವರ 'ಬೊಗಸೆ ಬುತ್ತಿ', ಶ್ರೀ ರಾಜಾಮಣಿಯವರ 'ಸುವರ್ಣ ಮಧುಚಂದ್ರ', ನಾಗತಿಹಳ್ಳಿ ಚಂದ್ರಶೇಖರ್‌ರವರ ಅಮೆರಿಕಾ ಅಮೆರಿಕಾ', ಡಾ.ಕೆ.ಜಿ. ಗುರುಮೂರ್ತಿಯವರ 'ಅಮೇರಿಕೆಯಲ್ಲಿ ಪ್ರವಾಸ', ವೆಂಕಟಸ್ವಾಮಿಯವರ 'ಅಮೆರಿಕಾದಲ್ಲಿ ನನ್ನ ಅನುಭವಗಳು', ದೊಡ್ಡರಂಗೇಗೌಡರ 'ಲೋಕಾಯಣ', ಶ್ರೀಮತಿ ಪಾರ್ವತಮ್ಮ ಮಹಾಲಿಂಗಶೆಟ್ಟಿಯವರ 'ಅಮೆರಿಕಾದ ಇತಿಹಾಸ ಮತ್ತು ಇಂದಿನ ಜೀವನ', ವಸಂತೀಚಂದ್ರರ 'ಭೋಗ ಭೂಮಿಯ ಮಡಿಲಲ್ಲಿ', ಬಿ.ಎಸ್. ಸಣ್ಣಯ್ಯನವರ 'ನಾನು ಹೋಗಿದ್ದೆ ಅಮೇರಿಕೆಗೆ', ಪಿ.ಎಂ. ಹೆಗಡೆಯವರ ಆಲ್ಮನೆಯಿಂದ ಆ್ಯನ್ ಆರ್ಬರ್‌ಗೆ', ಆರ್ಯಾಂಬ ಪಟ್ಟಾಭಿಯವರ 'ವಿದೇಶ ಪ್ರವಾಸ', ಇವು ಕನ್ನಡದಲ್ಲಿ ವಿಫುಲವಾಗಿ ಬಂದಿರುವ ಅಮೆರಿಕಾವನ್ನು ಕುರಿತ ಪ್ರವಾಸ ಸಾಹಿತ್ಯಗಳಾಗಿವೆ. ಮತ್ತು ದೇ.ಜ.ಗೌ.ರವರ 'ಜಗತ್ತಿನ ನಡುನೆತ್ತಿಯ ಮೇಲೆ', ಎಂಬ ಪ್ರವಾಸ ಕೃತಿ ಉತ್ತರಧ್ರುವ ಸಮೀಪದ ದೊಡ್ಡ ದೇಶವಾದ ಅಲಾಸ್ಕವನ್ನು ಕುರಿತು ಬಂದಿರುವ ಕೃತಿ, ಮತ್ತು ಅಮರ ನೆನಪು ಅಮೆರಿಕಾ. ಡಾ.ಬಿ.ಎಸ್. ಸ್ವಾಮಿಯವರ ಕೃತಿ, ನವರತ್ನರಾಂ ರವರ 'ಪ್ಯಾರಿಸ್ಸಿನಿಂದ ಪ್ರೇಯಸಿಗೆ', ತಿಪ್ಪೇಸ್ವಾಮಿಯವರ 'ಕಲಾವಿದ ಕಂಡ ಫ್ರಾನ್ಸ್', ಎತ್ತಣಿಂದೆತ್ತ ಮೀನಾರವರ ಫ್ರಾನ್ಸ್ ಪ್ರವಾಸ ಕಥನ, ಪ್ರೊ. ಎಸ್. ರಾಮಸ್ವಾಮಿಯವರ 'ಇಂಗ್ಲೆಂಡ್‌ನಲ್ಲಿ ಅಲೆಮಾರಿ', ದೇಜಗೌರವರ ದಿನಚರಿ ರೂಪದಲ್ಲಿರುವ 'ಆಫ್ರಿಕಾಯಾತ್ರೆ', ಹಾಗೂ 'ಏಸು ವಿಭೀಷಣರ ನಾಡಿನಲ್ಲಿ', ಇವು ಆಫ್ರಿಕಾ ಮತ್ತು ಇಸ್ರೇಲ್ ಹಾಗೂ ಶ್ರೀಲಂಕಾಗಳ ಪ್ರವಾಸಾನುಭವಗಳ ಕೃತಿಗಳಾಗಿವೆ. ಟಿ. ಮಹಾಬಲೇಶ್ವರ ಭಟ್ಟರ

'ಆಸ್ಟ್ರೇಲಿಯಾದಲ್ಲಿ ಎಪ್ಪತ್ತು ದಿನಗಳು', ಕುದ್ಕಾಡಿ ವಿಶ್ವನಾಥ ರೈ ಯವರ 'ಲಂಕಾ ದರ್ಶನ', ಶ್ರೀ ಪಾಟೀಲ ಪುಟ್ಟಪ್ಪರವರ 'ಮಾಲ್ಡಿವ್ ದೀಪಗಳು', ರಾವ್ ಬಹದ್ದೂರರ 'ನಾನು ಕಂಡ ಬಂಗ್ಲಾದೇಶ', ಶಿವರಾಮಕಾರಂತರ 'ಪೂರ್ವದಿಂದ ಪಶ್ಚಿಮಕ್ಕೆ' ಶ್ರೀಲಂಕಾ ನೇಪಾಳ – ಜಪಾನ್ ದೇಶಗಳ ಪ್ರವಾಸ ಕೃತಿ.

ಪ್ರೊ. ಕು.ಶಿ.ಹರಿದಾಸಭಟ್ಟರ 'ಜಗದಗಲ', ಟಿ.ಆರ್. ಗುರುರಾಜಾರಾವ್‌ರವರ 'ನಾ ಕಂಡ ಜಪಾನ್', ಪ್ರೊ. ಸಿ.ಹೆಚ್. ಮರಿದೇವರು 'ಆಗ್ನೇಷಿಯಾ ಮತ್ತು ಜಪಾನ್ ರಾಷ್ಟ್ರಗಳಲ್ಲಿ', 'ದಿವ್ಯ ಮೌನದ ದೇಶಗಳಲ್ಲಿ', ಆಸ್ಟ್ರೇಲಿಯಾ ಹಾಗೂ ನ್ಯೂಜಿಲ್ಯಾಂಡ್ ದೇಶಗಳ ಪ್ರವಾಸ ಕೃತಿ, 'ಸಮುದ್ರದಾಚೆಯಿಂದ ಗೋಕಾಕರ ಇಂಗ್ಲೇಂಡ್ ಪ್ರವಾಸದ ಕೃತಿ, ಕು.ಶ. ಹರಿದಾಸಭಟ್ಟರ 'ಇತಾಲಿಯ ನಾನು ಕಂಡಂತೆ', ಇದು ಇಟಲಿ ಪ್ರವಾಸಾನುಭವದ ಕೃತಿಯಾದರೆ ಡಿ.ಸಿ. ನಾಗಭೂಷಣರ 'ನಾ ಕಂಡ ಬ್ರಝಿಲ್', ಬ್ರಿಜಿಲ್ ದೇಶದ ಪ್ರವಾಸ ಸಾಹಿತ್ಯ. ಡಿ.ಕೆ. ನಾಗರಾಜುರವರ 'ನಾ ಕಂಡ ಮ್ಯಾಂಚೆಸ್ಟರ್', ಮ್ಯಾಂಚೆಸ್ಟರ ನ ಪ್ರವಾಸದ ಅನುಭವವನ್ನು ವಿವರಿಸುವ ಕೃತಿಯಾಗಿದೆ. ಸಿ.ಎಸ್. ಅಂಗಡಿಯವರ 'ಜಪಾನ್ ಪ್ರವಾಸದ ಅನುಭವಗಳು', ಎಂ. ವೀರಪ್ಪನವರ 'ಸಯೋನರ ಜಪಾನ್', ಕೆ. ಅನಂತರಾಮುರವರ 'ಉದಯ ರವಿ ನಾಡಿನಲ್ಲಿ' ಇವು ಜಪಾನ್ ದೇಶದ ಪ್ರವಾಸ ಅನುಭವಗಳ ಸಾರ ಸಂಗ್ರಹದ ಕೃತಿಗಳಾಗಿವೆ. ಶ್ರೀಮತಿ ಸುಧಾಮೂರ್ತಿಯವರ 'ಹಕ್ಕಿಯ ತೆರದಲ್ಲಿ . . . . . ', ವಿ.ಎಲ್. ರಾಮಚಂದ್ರರಾವ್ ರವರ 'ಮಾಲ್ಡೀವ್ಸ್ ದ್ವೀಪಗಳು' ಒಂದು ಪುಟ್ಟ ಪ್ರವಾಸ ಕಥನ.

ಮೇಲಿನ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೊರ ದೇಶಗಳ ಬಗ್ಗೆ ಬಂದಿರುವ ಪ್ರವಾಸ ಕೃತಿಗಳಾಗಿವೆ. ಈ ಕೃತಿಗಳಲ್ಲಿ ಆ ದೇಶಗಳ ಜನ ಜೀವನ, ಸಾಮಾಜಿಕ ಪರಿಸ್ಥಿತಿ, ಆರ್ಥಿಕ ವ್ಯವಸ್ಥೆ, ಅಲ್ಲಿನ ಸುಂದರ ಪ್ರೇಕ್ಷಣೀಯ ಸ್ಥಳಗಳು ಮತ್ತು ಸಾಂಸ್ಕೃತಿಕ ವಿಚಾರಗಳನ್ನು ಓದುಗರಿಗೆ ತಿಳಿಸಿಕೊಡುತ್ತವೆ. ಆ ದೇಶಗಳ ರೀತಿ–ನೀತಿಗಳು, ಮುಂದುವರಿದ ದೇಶಗಳ ಬಗ್ಗೆ ಅಲ್ಲಿನ ವ್ಯವಸ್ಥೆಯನ್ನು, ಅಲ್ಲಿನ ಸ್ವಚ್ಛತೆಯನ್ನು ಈ ಕೃತಿಗಳು ತಿಳಿಸುತ್ತವೆ. ವಿದೇಶ ಯಾತ್ರೆಯನ್ನು ಕುರಿತು ಈ ಗ್ರಂಥಗಳಲ್ಲದೆ ಹಲವು ಪತ್ರಿಕೆಗಳಲ್ಲಿ, ಸಾಪ್ತಾಹಿಕ, ಮಾಸಿಕಗಳಲ್ಲಿ ಹಾಗೂ ಪ್ರಬಂಧ ಸಂಕಲನಗಳಲ್ಲಿ ಪ್ರಕಟವಾದ ಪ್ರವಾಸ ಸಾಹಿತ್ಯ ಲೇಖನಗಳಂತೂ ಅಸಂಖ್ಯಾತವಾಗಿವೆ. ಬಹುಪಾಲು ಉತ್ತಮ ಲೇಖನಗಳು ಹೀಗೆ ಚೆಲ್ಲಾಪಿಲ್ಲಿಯಾಗಿವೆ. ಮುಗಳಿ, ಎಸ್.ವಿ. ಭಟ್ಟ ಕಟ್ಟಿಮನಿ, ಸ.ಸ. ಮಾಳವಾಡ, ಜ್ಯೋತಿಷಿ ಬಿ.ವಿ.ರಾಮನ್, ಭಾಸ್ಕರರಾವ್ ಮಾಲೂಕ್ಕರ್,

ಸಿದ್ದನವಳ್ಳಿ ಕೃಷ್ಣಶರ್ಮ, ತೀ.ನಂ. ಶ್ರೀಕಂಠಯ್ಯ, ಆರ್.ಸಿ. ಹಿರೇಮಠ, ಹಾ.ಮಾ. ನಾಯಕ, ಸರೋಜಿನಿ ಮಹಿಷಿ, ಮತ್ತೀಹಳ್ಳಿ ನಾಗರಾಜರಾವ್, ಸಿಸು ಸಂಗಮೇಶ, ಮುಂತಾದವರ ಹೆಸರುಗಳನ್ನು ಉದ್ಧರಿಸಬಹುದು. ಬಿ.ಪುಟ್ಟಯ್ಯನವರ ಅಭಿವೃದ್ಧಿ ಸಂದೇಶ ಪಶ್ಚಿಮ ದೇಶದಲ್ಲಿಯ ಪ್ರವಾಸದ ಪ್ರಥಮ ಗ್ರಂಥಗಳು. ಸರ್ಕಾರದ ಉನ್ನತ ಹುದ್ದೆಯಲ್ಲಿದ್ದು, "ವಿಶ್ವದಲ್ಲಿ ಹಲವು ಬಾರಿ ಸಂಚರಿಸಿ, ಹಲವು ದೇಶದ, ಹಲವು ಜನರ, ಜೀವನ ಸಂಸ್ಕೃತಿಗಳನ್ನು ತುಂಬ ಹತ್ತಿರದಿಂದ ಕಂಡು ವಿದೇಶಿಯರ ಬಗೆಗೆ ಅತ್ಯಂತ ನೈಜವಾಗಿ ರಚಿತವಾಗಿರುವ ಗ್ರಂಥವೆಂದರೆ ಕೆ.ಪಿ.ಎಸ್. ಮನೆನ್‌ರವರ 'ವಿಶ್ವ ಪರ್ಯಟನೆ', ಇಂಗ್ಲೀಷ್‌ನಲ್ಲಿರುವ ಈ ಗ್ರಂಥವನ್ನು ಮಾ.ಭೀ, ಶೇಷಗಿರಿರಾವ್‌ರವರು ಕನ್ನಡಕ್ಕೆ ಅನುವಾದಿಸಿ ಪ್ರವಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ಕೊಟ್ಟಿದ್ದಾರೆ."[೧೬]

ಶಿವರಾಮ ಕಾರಂತರ 'ಅಬೂವಿನಿಂದ ಬರಾಮಕ್ಕೆ' ಭಾರತದ ಪ್ರೇಕ್ಷಣೀಯ ಸ್ಥಳಗಳಾದ ಆಬೂ, ಆಜ್ಮೀರ, ಪುಷ್ಕರ, ಜಯಪುರ, ದಿಲ್ಲಿ, ಸಿಮ್ಲಾ ಈ ಪ್ರದೇಶಗಳ ನಿಸರ್ಗ ಹಾಗೂ ವಾಸ್ತು ಕೃತಿಗಳ ಸೊಬಗಿನ ವಿಶೇಷತೆಯನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. "ಈ ಕೃತಿಯಲ್ಲಿ ನಿಸರ್ಗ ಪ್ರಿಯನೊಬ್ಬನ. ಕಲಾರಾಧಕನೊಬ್ಬನ ಸಹೃದಯ ಪರವಾದ ವಿಹಾರವನ್ನು ಕೃತಿಯುದ್ಧಕ್ಕೂ ನಾವು ಕಾಣುತ್ತೇವೆ."[೧೭] ಸಿದ್ಧನವಳ್ಳಿ ಕೃಷ್ಣಶರ್ಮರ 'ವರ್ಧಾಯಾತ್ರೆ', ಕೃಷ್ಣಶರ್ಮರ 'ದೇಶಿ ಸಂಸ್ಥಾನಗಳಲ್ಲಿ' ಮತ್ತು 'ಭೂದಾನ ಯಜ್ಞಯಾತ್ರೆ', ರಾಘವೇಂದ್ರ ಪಾಟೀಲರ 'ಅಜ್ಞಾತ ಮುಂಬಯಿ' ಶರಾವತಿಯಿಂದ ಸಾಬರಮತಿ, ವಿ.ಚಿ. ಹಿತ್ತಲಮನಿ ಅವರ ಕೃತಿ. ಜಿ.ಮರುಳು ಸಿದ್ದಯ್ಯನವರ 'ಭಾರತ ಪ್ರವಾಸ ಚಿತ್ರಗಳು', ಡಿ.ಬಿ. ರಂಗಸ್ವಾಮಿಯವರ 'ಭಾರತಯಾತ್ರೆ', ಕೆ.ಕೊಟ್ರೇಗೌಡರವರ 'ನಮ್ಮ ಪ್ರವಾಸ', ಟಿ.ಗೂ. ರಮೇಶ ಹಾಗೂ ಡಾ. ಎನ್.ಜಿ. ಕೋಟೇಶರವರ 'ಭಾರತದರ್ಶನ', ಎ.ವಿ. ಶಾಸ್ತ್ರಿಯವರ 'ಭಾರತದರ್ಶನ ಭಾಗ-೧', ಡಾ.ಬಿ.ಎಸ್. ಸ್ವಾಮಿಯವರ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ', ಡಾ॥ ಡಿ.ಬಿ. ರಾಮಚಂದ್ರಾಚಾರ್ ರವರ 'ಮೂರುವಾರ ಮೂರು ಕಡೆ', ಶಾ.ಮಂ. ಕೃಷ್ಣರಾಮರ 'ದೇವಭೂಮಿ ಗೋಮಾಂತಕ', ಜಿ. ವೆಂಕಟಯ್ಯನವರ 'ಬನದ ಸೆರಗು', ಪಾಟೀಲಪುಟ್ಟಪ್ಪನವರ 'ನಮ್ಮದು ಈ ಭರತಭೂಮಿ', ಶ್ರೀ. ಮ.ನಿ. ಪ್ರ. ಜಗದ್ಗುರು ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು ಮತ್ತು ಎಂಟು ಮಂದಿ ಶ್ರೀಗಳು ಹಾಗೂ ಭಕ್ತರು ನಡೆಸಿದ ದಕ್ಷಿಣ ಮತ್ತು ಉತ್ತರ ಭಾರತ ಪ್ರವಾಸ ಕಥನ 'ಭಾರತ ಯಾತ್ರೆ', ಶ್ರೀಮತಿ ಪ್ರೇಮಾಭಟ್ ರವರ 'ಪೂರ್ವಾಂಚಲದಲ್ಲಿ ಕೆಲವು ದಿನಗಳು', ಕೆ.ಪಿ. ಪೂರ್ಣಚಂದ್ರ ತೇಜಸ್ವಿ

---

[೧೬] ವಿಶ್ವಕೋಶ, ಸಂಪುಟ-೩, ಪು. ೭೪೩.

ಅವರ 'ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್' ಇದು ಅಂಡಮಾನ್ ಮತ್ತು ಈಜಿಪ್ಟ್‌ನ ಸಂಸ್ಕೃತಿಯ ಭಾಗವಾಗಿರುವ ನೈಲ್ ನದಿಯ ಕುರಿತ ಕಥನವಾಗಿದೆ. ರಹಮತ್ ತರೀಕೆರೆ ಯವರ 'ಅಂಡಮಾನ್ ಕನಸು'.

ಹೀಗೆ ಭಾರತದಲ್ಲಿರುವ ಪ್ರವಾಸಿ ಸ್ಥಳಗಳಿಗೆ ಪ್ರವಾಸ ಕೈಗೊಂಡು ಪಡೆದ ಅನುಭವಗಳ ಸಾರವನ್ನು ಕೆಲವು ಲೇಖಕರು ತಿಳಿಸಿದ್ದಾರೆ. ಇಷ್ಟಲ್ಲದೆ ಭಾರತೀಯ ಕ್ಷೇತ್ರದರ್ಶನ ಪಡೆದ ಅನುಭವಗಳ ಬಗ್ಗೆ ಕನ್ನಡದಲ್ಲಿ ಕೃತಿಗಳು ಬಂದಿವೆ.

ಭಾರತೀಯರಲ್ಲಿ ಪ್ರವಾಸ ಕೈಗೊಳ್ಳುವುದೆಂದರೆ ಮೊದಲಿಗೆ ತಯಾರಾಗುವುದು. ತೀರ್ಥಯಾತ್ರೆಗೆ ಹೀಗೆ ಯಾತ್ರೆ ಹೊರಟವರು ಬಂದ ನಂತರ ತಮ್ಮ ಅನುಭವಗಳನ್ನು ಓದುಗರೊಂದಿಗೆ ಹಂಚಿಕೊಳ್ಳುವುದು ಬಹಳ ವಿರಳ. ಹೀಗೆ ತೀರ್ಥಯಾತ್ರೆ ಕೈಗೊಳ್ಳಬೇಕಾದರೆ ಕಾರಣ ಭಾರತೀಯರ ಮನಸ್ಸು ಶಾಂತಿಯನ್ನು ಪಡೆಯಲು ಹುಡುಕುವ ಪ್ರಶಸ್ತವಾದ ಸ್ಥಳ ದೇವಾಲಯಗಳು, ಇಲ್ಲಿಗೆ ಭೇಟಿಕೊಟ್ಟರೆ ಅವರಿಗೆ ದೇವರ ದರ್ಶನ ಪಡೆದರೆ ಮನಸ್ಸಿಗೆ ನೆಮ್ಮದಿ, ಶಾಂತಿ ಸಮಾಧಾನ ಲಭಿಸಿದ ಅನುಭವ. ಅಲ್ಲಿ ಹರಿಯುವ ನದಿಗಳಲ್ಲಿ ಸ್ನಾನ ಮಾಡಿದರೆ ಮಾಡಿದ ಪಾಪಗಳು ಪರಿಹಾರವಾಗಿ ಪುಣ್ಯ ಪ್ರಾಪ್ತಿಯಾಯಿತು ಎಂಬು ನಂಬಿಕೆಗಳು ಅವರ ಬದುಕಿನಲ್ಲಿ ಬೇರು ಬಿಟ್ಟಿರುವುದರಿಂದ ಭಯ-ಭಕ್ತಿಯಿಂದ ಯಾತ್ರೆ ಹೊರಟವರೆ ಹೆಚ್ಚು. ಆದರೆ ಅವರು ತಮ್ಮ ಅನುಭವಗಳನ್ನು ಸಾಹಿತ್ಯ ರೂಪದಲ್ಲಿ ಹೊರತಂದಿರುವುದು ಬಹಳ ಕಡಿಮೆ.

ಸೂರಿ ವಿಘ್ನೇಶ್ವರ ಶಾಸ್ತ್ರಿ ವೆಂಕಟರಮಣ ಶಾಸ್ತ್ರಿಯವರ 'ದಕ್ಷಿಣ ಯಾತ್ರಾ ಚರಿತ್ರೆ' ದಕ್ಷಿಣ ಭಾರತದ ಪವಿತ್ರ ಕ್ಷೇತ್ರಗಳ ಪರಿಚಯವನ್ನು ಓದುಗರಿಗೆ ಮಾಡಿಕೊಡುತ್ತದೆ. ಸ್ವಾಮಿ ಸೋಮನಾಥಾನಂದರ 'ಹೈಮಾಚಲ ಸಾನಿಧ್ಯದಲ್ಲಿ', 'ಅಮರನಾಥಯಾತ್ರೆ,' ಸ್ವಾಮಿ ಜ್ಞಾನ ಘನಾನಂದರ 'ಕೈಲಾಸ-ಮಾನಸ ಸರೋವರ ಯಾತ್ರೆ', ಕೃಷ್ಣ ನಾರಾಯಣ ಗೋಸಾಮಿಯವರ 'ಹಿಮಾಲಯ ದರ್ಶನ', ಜಿ.ವಿ. ನರಸಿಂಹಮೂರ್ತಿಯವರ 'ಆಸೇತು ಹಿಮಾಚಲಯಾತ್ರೆ', ಡಾ॥ ಜಿ.ಎಸ್. ಶಿವರುದ್ರಪ್ಪನವರ 'ಗಂಗೆಯ ಶಿಖರಗಳಲ್ಲಿ', ಶ್ರೀಮತಿ ಶಾಂತಾದೇವಿಯವರ 'ಶ್ರೀಗಿರಿಯಿಂದ ಹಿಮಗಿರಿಗೆ', ಬಿ.ವಿ. ವಿದ್ಯಾನಂದ ಶೆಣೈರವರ 'ಭಾರತದರ್ಶನ', ಲಲಿತ ಶಾಸ್ತ್ರಿಯವರ 'ಹಿಮವಂತನ ನಾಡಿನಲ್ಲಿ', ಶಮಂತರವರ 'ಕಾಲ್ನಡಿಗೆಯಲ್ಲಿ ಹಿಮಾಲಯಕ್ಕೆ ರಮ್ಯ ಸಾಹಸ', ಹ.ರಾ. ಪುರೋಹಿತರ "ರಾಮೇಶ್ವರ ಕನ್ಯಾಕುಮಾರಿ ದರ್ಶನ', ಕೆ. ಗಣೇಶ ಮಲ್ಯರ

[೭೨] ಡಾ.ಎಸ್. ವಿದ್ಯಾಶಂಕರ್, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ. ಪು. ೩೭೪.

'ಶರಾವತಿಯಿಂದ ಗೋದಾವರಿವರೆಗೆ', ಮತ್ತು ಕೈಲಾಸ ಕೆ.ಗೋಪಾಲಕೃಷ್ಣರಾಯರ 'ತಿರುಪತಿಯಯಾತ್ರೆ', ವಿ.ನಾ.ರವರ 'ಯಾತ್ರಿಕನ ಪತ್ರಗಳು', ಎಸ್. ರಜತಾದ್ರಿಯವರ 'ಪಶ್ಚಿಮದ ಹೊಂಬೆಳಕು' ಮುಂತಾದ ಕೃತಿಗಳು ಕನ್ನಡದಲ್ಲಿ ಬಂದಿರುವ ತೀರ್ಥಯಾತ್ರೆಯ ಪ್ರವಾಸ ಕೃತಿಗಳಾಗಿವೆ.

ವಿದೇಶಯಾತ್ರೆ, ದೇಶಿಯಾತ್ರೆ, ತೀರ್ಥಯಾತ್ರೆಯ ಪ್ರವಾಸ ಸಾಹಿತ್ಯವಲ್ಲದೆ, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದ ಪ್ರವಾಸಿಗರು ತಮ್ಮ ಅನುಭವಗಳನ್ನು ಸಾಹಿತ್ಯ ರೂಪದಲ್ಲಿ ಹಂಚಿಕೊಂಡಿದ್ದಾರೆ. ಇವು ಕನ್ನಡದಲ್ಲಿ ಕೆಲವು ಬರಹಗಳನ್ನು ಕಾಣಬಹುದು. ಇದು ಕರ್ನಾಟಕದ ಇತಿಹಾಸ ಪ್ರಸಿದ್ಧ ಪ್ರದೇಶಗಳ ಯಾತ್ರೆಯ ಅನುಭವಗಳಾಗಿವೆ. ಡಾ॥ ಹಿರೇಮಲ್ಲೂರು ಈಶ್ವರನ್ ರವರ 'ಕವಿ ಕಂಡ ನಾಡು', ಗುಂಡ್ಮಿ ಚಂದ್ರಶೇಖರ ಐತಾಳರ 'ಸೌಂದರ್ಯದ ಸಾನಿಧ್ಯದಲ್ಲಿ', ಹಾಗೂ 'ಚೆಲವು ಚೆಲ್ಲಿದಲ್ಲಿ', ಶಂಕರಪಾಟೀಲರ 'ಸವಿ ಸಂಚಾರ', ಜೀರಿಗೆಕಟ್ಟೆ ಬಸಪ್ಪನವರ 'ಕರ್ನಾಟಕ ಯಾತ್ರೆ', ಪಾಟೀಲ ಪುಟ್ಟಪ್ಪನವರ 'ನನ್ನದು ಈ ಕನ್ನಡ ನಾಡು', ಮಾನ್ವಿ ನರಸಿಂಹರಾವ್ ರವರ 'ಕನ್ನಡಯಾತ್ರೆ', ಆರಯ್ಯನವರ 'ನಾ ಕಂಡ ಕರ್ನಾಟಕ', ಸಿದ್ದನವಳ್ಳಿ ಕೃಷ್ಣಶರ್ಮರ 'ವರ್ಧಾಯಾತ್ರೆ'.

ಇಷ್ಟಲ್ಲದೆ ಕನ್ನಡದಲ್ಲಿ ಬೇರೆ ಭಾಷೆಯಿಂದ ಕನ್ನಡಕ್ಕೆ ಅನುವಾದ ಗ್ರಂಥಗಳು ಬಂದಿವೆ. ಜಿ.ಪಿ. ರಾಜರತ್ನಂ ರವರ ಚೀನಾದೇಶದ 'ಬೌದ್ಧಯಾತ್ರಿಕರು', ತ.ರಾ.ಸು. ಅವರ 'ನಾ ಕಂಡ ವಿಜಯನಗರ', ಎಚ್.ಎಲ್. ನಾಗೇಗೌಡರ 'ಮಾರ್ಕೊಪೋಲೊ ಪ್ರವಾಸ ಕಥನ' ದಶಕಗಳಷ್ಟು ಕಾಲ ಇಡೀ ಭಾರತದಲ್ಲಿ ಸಂಚರಿಸಿ ಹಲವು ಪ್ರಾಚ್ಯ ಕೋಶಾಗಾರಗಳಲ್ಲೂ ಗ್ರಂಥಾಲಯ ಹಾಗೂ ವಸ್ತು ಸಂಗ್ರಹಾಲಯಗಳಲ್ಲೂ ಹುದುಗಿದ ವರದಿಗಳನ್ನು ಎಕ್ಕಿ ತಂದು ಅವುಗಳ ಸಾರವನ್ನು ಭಟ್ಟಿ ಇಳಿಸಿ ಸು. ೨೦೦ ಜನ ವಿದೇಶಿ ಪ್ರವಾಸಿಗಳ ಪ್ರವಾಸ ಕಥನವನ್ನು ಕನ್ನಡದಲ್ಲಿ "ಪ್ರವಾಸಿ ಕಂಡ ಇಂಡಿಯಾ" ಎಂಬ ಹೆಸರಿನಲ್ಲಿ ೪ ಬೃಹತ್ ಸಂಪುಟಗಳಲ್ಲಿ ಹೊರ ತಂದಿದ್ದಾರೆ. ಈ ಗ್ರಂಥಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ ಕಾಣಿಕೆ ಕೊಟ್ಟು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಹೀಗೆ ಕನ್ನಡದಲ್ಲಿ ಪ್ರವಾಸ ಸಾಹಿತ್ಯವು ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದಿದೆ. ಪ್ರವಾಸ ಕೈಗೊಂಡವರ ಅನುಭವಗಳನ್ನು ಓದುವಾಗ ಮನಸ್ಸಿಗೆ ಆನಂದವುಂಟಾಗುತ್ತದೆ. ನಾವು ಕಾಣದ ಪ್ರದೇಶಗಳ ಸವಿವರ ಈ ಕೃತಿಗಳಲ್ಲಿ ನಮಗೆ ದೊರಕುತ್ತದೆ. ಎಲ್ಲರೂ ದೇಶ, ವಿದೇಶ

ಪ್ರವಾಸವನ್ನು ಕೈಗೊಳ್ಳಲು ಸಾಧ್ಯವಿಲ್ಲ. ಇಂತಹ ಕೃತಿಗಳ ಮೂಲಕ ಅದರ ಅನುಭವ ಮತ್ತು ಅಲ್ಲಿನ ಬದುಕಿನ ಚಿತ್ರಣವನ್ನು ಓದಿ ತಿಳಿದುಕೊಳ್ಳಬಹುದು. ಪ್ರವಾಸ ಕಥನವನ್ನು ಓದಿದಾಗ ಜ್ಞಾನವನ್ನು ಮತ್ತು ನಮ್ಮ ಅನುಭವಗಳನ್ನು ವಿಸ್ತರಿಸಿಕೊಳ್ಳಲು ಈ ಕೃತಿಗಳು ಸಹಾಯಕವಾಗಿವೆ.

# ಅಧ್ಯಾಯ – ೩
# ವಿಸ್ಮಯಗಳ ನಾಡಿನಲ್ಲಿ

## ೧. ಅಮೆರಿಕೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು

ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರವಾಸ ಸಾಹಿತ್ಯಗಳು ರಚಿತಗೊಂಡಿವೆ. ಪ್ರವಾಸ ಕೈಗೊಂಡವರೆಲ್ಲ ಪ್ರವಾಸದ ಅನುಭವಗಳನ್ನು ಹೊರತರಲು ಸಾಧ್ಯವಿಲ್ಲ. ಹಾಗೆ ತಂದರೂ ಅದರಲ್ಲಿ ಯಶಸ್ವಿಯಾಗುವುದಕ್ಕೂ ಸಾಧ್ಯವಿಲ್ಲ. ಕೆಲವೇ ಜನರು ಮಾತ್ರ ಇದರಲ್ಲಿ ಯಶಸ್ಸು ಕಾಣಲು ಸಾಧ್ಯ;. ಪ್ರವಾಸ ಕೈಗೊಂಡವರೆಲ್ಲ ಬರೆದ ಸಾಹಿತ್ಯ ಪ್ರವಾಸ ಸಾಹಿತ್ಯವಾಗುವುದಿಲ್ಲ. ಸಾಹಿತ್ಯ ರಚನೆಯಲ್ಲಿ ತೊಡಗಿದ ಮಹನೀಯರಲ್ಲಿ ದೇಜಗೌ ರವರ 'ವಿಸ್ಮಯಗಳ ನಾಡಿನಲ್ಲಿ', ಪ್ರವಾಸ ಕೃತಿ. ಪ್ರವಾಸ ಸಾಹಿತ್ಯದಲ್ಲಿ ಒಂದು ಹೊಸ ಹಾದಿಯನ್ನು ರೂಪಿಸಿದ ಕೃತಿಯಾಗಿದೆ. ಇದರಲ್ಲಿ ಕಥಾ ನಿರೂಪಣೆಗಾಗಿ ಕಾದಂಬರಿ ತಂತ್ರವನ್ನು ಬಳಸಿಕೊಂಡು ಯಶಸ್ವಿಯಾಗಿದ್ದಾರೆ. ಅವರು ಕೈಗೊಂಡ ಅಮೆರಿಕ ಪ್ರವಾಸದ ಅನುಭವಗಳು ಈ ಕೃತಿಯಲ್ಲಿ ಮನಮೋಹಕವಾಗಿ ಮೂಡಿ ಬಂದಿವೆ.

"ವಿಸ್ಮಯಗಳ ನಾಡಿನಲ್ಲಿ" ಎಂಬ ಕೃತಿಯ ಹೆಸರೇ ತಿಳಿಸುವಂತೆ ಅಮೆರಿಕ ದೇಶದ ವಿಸ್ಮಯಗಳನ್ನು ಓದುಗನಿಗೆ ಕುತೂಹಲಭರಿತವಾಗಿ ಉಲ್ಲಾಸಿತನಾಗಿ ಓದುವಂತೆ ಮಾಡುತ್ತದೆ. ಅವನಲ್ಲಿ ತನ್ಮಯತೆಯನ್ನುಂಟು ಮಾಡುತ್ತದೆ. ಪ್ರವಾಸದ ಅನುಭವಗಳನ್ನು ದಾಖಲಿಸುವಾಗ ಕೃತಿಯ ಪ್ರವೇಶದಲ್ಲಿ ದೇಜಗೌ ರವರು ಹೀಗೆ ಹೇಳುತ್ತಾರೆ. "ನಾನು ಕಂಡಿರುವ ಅಮೆರಿಕೆಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಮುಖಗಳನ್ನು ಮತ್ತು ಅಮೆರಿಕೆಯ ಪ್ರತಿಭೆಯನ್ನು ಸಂಕ್ಷಿಪ್ತವಾಗಿಯಾದರೂ ಆದಷ್ಟು ವ್ಯಾಪಕವಾಗಿ ಚಿತ್ರಿಸಬೇಕು. ಅಮೆರಿಕೆ ಇಡೀ ಜಗತ್ತಿಗೆ ಕಣ್ಣೆಲೆಯಾಗಿ, ಆದರ್ಶವಾಗಿ, ಭವಿಷ್ಯದ ಭರವಸೆಯಾಗಿ ವಿಕಾಸಗೊಳ್ಳಲು ಕಾರಣವಾದ ನಿಸರ್ಗ ಹಾಗೂ ಮನುಷ್ಯ ಶಕ್ತಿಗಳನ್ನು ಅಲ್ಪ ಪ್ರಮಾಣದಲ್ಲಾದರೂ ಕುಂಚಿಸಬೇಕು. ಆ ದೇಶದ ಸರ್ವತೋಮುಖವಾದ ಅಭ್ಯುದಯಕ್ಕೆ ನಿಸರ್ಗ ಸಂಪತ್ತು ಮಾತ್ರವೇ ಮುಖ್ಯವಲ್ಲ. ಅಲ್ಲಿಯ ಜನರ ದುಡಿಮೆ, ಸಾಹಸಮನೋಧರ್ಮ, ಆತ್ಮಪ್ರತ್ಯಯ, ಸ್ವಾತಂತ್ರ್ಯವೇ ಮೊದಲಾದ ತತ್ವಗಳನ್ನೊಳಗೊಂಡ ಅಮೆರಿಕಾ ಸಂಹಿತೆಯನ್ನು ನಮ್ಮ ಜನರಿಗೆ ಮನದಟ್ಟು

ಮಾಡಿಕೊಡಬೇಕು"[೧] ಎಂಬ ಮಾತೇ ಹೇಳುವಂತೆ ಈ ಕೃತಿಯಲ್ಲಿ ಅಮೆರಿಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ಚಿತ್ರಿಸಿ ಕನ್ನಡ ಜನರಿಗೆ ಮನದಟ್ಟಾಗುವಂತೆ ತಿಳಿಸಿ ಕೊಟ್ಟಿದ್ದಾರೆ.

ಅಮೆರಿಕ ದೇಶದ ಪ್ರವಾಸವನ್ನು ಕೈಗೊಂಡ ಅನೇಕರು ಕೃತಿಗಳನ್ನು ಬರೆದಿದ್ದಾರೆ. "ಅಮೆರಿಕ ಸಂಯುಕ್ತ ಸಂಸ್ಥಾನ ವಿಶ್ವದ ಅತ್ಯಂತ ಸಂಪದ್ಭರಿತ ದೇಶ. ನಮ್ಮ ಭಾರತ ದೇಶದ ಮೂರರಷ್ಟು ವಿಶಾಲ ವಿಸ್ತೀರ್ಣವುಳ್ಳದ್ದಾಗಿದ್ದರೂ ನಮ್ಮ ದೇಶದ ಮೂರನೆಯ ಒಂದು ಭಾಗದ ಜನಸಂಖ್ಯೆಯನ್ನು ಪಡೆದಿದೆ. ಆ ದೇಶ ವಿಜ್ಞಾನ ತಂತ್ರಜ್ಞಾನಗಳ ತವರೂರು, ರಾಜಕೀಯ ಕೇಂದ್ರ, ವಿಶ್ವದ ಇತರ ರಾಷ್ಟ್ರಗಳಿಗೆ ಸ್ಫೂರ್ತಿಯ ನೆಲೆ."[೨] ಹೀಗೆ ಅಮೆರಿಕಾ ದೇಶ ಎಲ್ಲ ವಿಚಾರಗಳಲ್ಲೂ ಮುಂದಿದೆ. "ವಿಸ್ಮಯಗಳ ನಾಡಿನಲ್ಲಿ "ಈ ಕೃತಿಯಲ್ಲಿ ದೇಜಗೌ ರವರು ಅಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರವನ್ನು ವಿವರವಾಗಿ ಚಿತ್ರಿಸಿದ್ದಾರೆ.

"ವಿಸ್ಮಯಗಳ ನಾಡಿನಲ್ಲಿ" ಇಲ್ಲಿ ಕಾದಂಬರಿಯ ಕಥನ ತಂತ್ರವನ್ನು ಬಳಸಿದ್ದಾರೆ. ಸವಿತಾದೇವಿ (ಸಾವಿತ್ರಮ್ಮ) ಧರ್ಮೇಂದ್ರರು (ದೇ.ಜ.ಗೌ) ಇಂದುಮತಿ (ಶಶಿಕಲಾ), ಚಂದ್ರಕಾಂತ (ಚಂದ್ರಶೇಖರ್), ಮಾನವೇಂದ್ರ, ಕಮಲ ನಯನ ಅನಿಕೇತನ (ಶಶಿಕಲಾ-ಚಂದ್ರಶೇಖರ್‌ರವರ ಮಕ್ಕಳು) ಮತ್ತು ಅವರ ಸ್ನೇಹಿತರುಗಳು ಇಲ್ಲಿ ಪಾತ್ರಗಳಾಗಿ ನಿರೂಪಿತವಾಗಿವೆ. ಇದು ಓದುಗರನ್ನು ಸೂಜಿಗಲ್ಲಿನಂತೆ ಸೆಳೆಯಲು ಕಾರಣವಾಗಿದೆ.

ದೇಜಗೌ ರವರ "ವಿಸ್ಮಯಗಳ ನಾಡಿನಲ್ಲಿ" ಪ್ರವಾಸ ಕಥನದಲ್ಲಿ ಅಮೆರಿಕಾ ದೇಶದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ಬೆರಗುಗಣ್ಣಿನಿಂದ ನೋಡಿ ದಾಖಲಿಸಿದ್ದಾರೆ. ಮರುಭೂಮಿಯಲ್ಲಿ ಹಸಿರು ಸಿರಿ" ಭಾಗದಲ್ಲಿ ಅಮೆರಿಕಾದ ವೆಲ್ಸ್ ನಗರಕ್ಕೆ ತಲುಪಿದಾಗಿನಿಂದ ಅವರ ಅನುಭವಗಳು ದಾಖಲಾಗುತ್ತವೆ. ಅಲ್ಲಿ ಅವರ ಮೊಮ್ಮಕ್ಕಳು ಪಡೆದ ಶಿಕ್ಷಣ ಮತ್ತು ಅವುಗಳ ಇಂಗ್ಲಿಷಿನಲ್ಲಿ ಕನ್ನಡವನ್ನು ಮಾತನಾಡವುದು. ಕೇಳಿ ಅವರಿಗೆ ಅರ್ಥವಾಗದೆ ತುಂಬ ನೋವನ್ನು ಅನುಭವಿಸುತ್ತಾರೆ. "ಹೃದಯ ಹೃದಯಗಳನ್ನು ಬೆಸೆಯುವ ಸಾಧನವೆಂದರೆ ಸಂಹವನ ಮಾಧ್ಯಮವಾದ ಭಾಷೆ"[೩] ಎರಡು ಹೃದಯಗಳನ್ನು ಬೆಸೆಯಲು ಭಾಷೆ ಮುಖ್ಯವಾಗುತ್ತದೆ. ಅದನ್ನು ಕಲಿತುಕೊಳ್ಳಲು ಮತ್ತು ಅರ್ಥ ಮಾಡಿಕೊಳ್ಳುವ ವಿಶ್ವಾಸ ತಾಳುತ್ತಾರೆ.

---

[೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. ೪.
[೨] ಆರ್ಯಾಂಬ ಪಟ್ಟಾಭಿ - ವಿದೇಶಿ ಪ್ರವಾಸ, ಪು. ೩.
[೩] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. ೨.

ಅಮೆರಿಕಾದಲ್ಲಿ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಅಲ್ಲಿನ ತಂದೆ-ತಾಯಿಗಳು ವಹಿಸುವ ಕಾಳಜಿಯನ್ನು ಅವರು ತಿಳಿಸುತ್ತಾರೆ. ಅದಕ್ಕಾಗಿ ಅವರ ಮಗಳು ಮತ್ತು ಅಳಿಯ ಶಾಲೆಗಳ ಸರ್ವೆ ಮಾಡುವುದು. ಅವುಗಳ ಬಗ್ಗೆ ಮಾಹಿತಿಯನ್ನು ಧರ್ಮೇಂದ್ರರಿಗೆ ತಿಳಿಸಿದಾಗ ಚಕಿತರಾಗುತ್ತಾರೆ.

ಧರ್ಮೇಂದ್ರರ ಬೆಳಗಿನ ಹೊತ್ತು ತಿರುಗಾಟಕ್ಕೆ ಹೊರಟಾಗ ಎದುರು ಸಿಕ್ಕ ಯುವತಿ, ಯುವಕರು ಇವರಿಗೆ 'ಹಾಯ್' ಎಂದು ಹೇಳುತ್ತಾರೆ. ಇವರಿಗೆ ಗಾಬರಿಯಾಗುತ್ತದೆ. ಗುರುತು ಪರಿಚಯವಿಲ್ಲದ ಊರಿನಲ್ಲಿ 'ಹಾಯ್' ಎಂದು ಹೇಳುವುದನ್ನು ಕೇಳಿ ಇದರ ಬಗ್ಗೆ ಅವರಿಗೆ ಕುತೂಹಲವುಂಟಾಗಿ ಚಂದ್ರಕಾಂತರನ್ನು ವಿಚಾರಿಸಲು ಇದು ಇಲ್ಲಿನ ಸಂಸ್ಕೃತಿಯ ವೈಶಿಷ್ಟ್ಯ ಎಂಬುದು ತಿಳಿಯುತ್ತದೆ. "ಇಲ್ಲಿ ಎಲ್ಲ ಸೌಕರ್ಯವಿದೆ ಆದರೆ ಇಲ್ಲಿಯ ಜನರಲ್ಲಿ ಮರುಕ ಅನುಕಂಪಗಳಿಲ್ಲ, ದಾರಿಯಲ್ಲಿ ಹತ್ತು ಸಾರಿ ಭೇಟಿಯಾದರು 'ಹಾಯ್' ಎಂದು ನುಡಿದು ಹೋಗುತ್ತಾರೆಯೇ ಹೊರತು ನಿಂತು ತಮ್ಮ ಕಷ್ಟ ಸುಖಗಳನ್ನು ವಿಚಾರಿಸುವುದಿಲ್ಲ. ನೆರೆಯ ಮನೆಯವರು ಸತ್ತು ಬಿದ್ದಿದ್ದರೂ ಹೋಗಿ ಮಾತನಾಡಿಸುವುದಿಲ್ಲ. ಈ ವಿಷಯದಲ್ಲಿ ಇಂಡಿಯಾ ಮೇಲು"[೪] ಎಂದು ಶಿವರಾಜ್ ಹೇಳಿದ ಮಾತು ಧರ್ಮೇಂದ್ರರಿಗೆ ನೆನಪಾಗುತ್ತದೆ. ಅಮೆರಿಕಾದ ಜನಜೀವನ ಯಾಂತ್ರಿಕತೆಯಿಂದ ಕೂಡಿದ್ದು, ಅವರಿಗೆ ಅವರ ಕೆಲಸ ಕಾರ್ಯಗಳಲ್ಲಿ ಹೆಚ್ಚಾಗಿ ಮಗ್ನರಾಗುವುದರಿಂದ ಬೇರೆಯವರ ಕಡೆ ಹೆಚ್ಚಿನ ಆಸಕ್ತಿ ವಹಿಸುವುದಿಲ್ಲ. ಮತ್ತು ಸಂಬಂಧಗಳ ಬಗ್ಗೆ ಅವರಿಗೆ ಹೆಚ್ಚಿನ ವಿಶ್ವಾಸವಿಲ್ಲದಿರುವುದನ್ನು ಕಾಣಬಹುದು. ಭಾರತದಲ್ಲಿ ಮಾತ್ರ ಸಂಬಂಧಗಳಿಗೆ ಅತಿ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುವುದನ್ನು ಕಾಣಬಹುದು. ಇದು ಭಾರತೀಯ ಸಂಸ್ಕೃತಿಯ ಗುಣವಿರಬಹುದು. ಪ್ರತಿ ಜೀವಿಗಳಲ್ಲಿ ಭಾವನಾತ್ಮಕ ಸಂಬಂಧಗಳನ್ನು ಬೆಳೆಸಿಕೊಳ್ಳುವುದು ಭಾರತೀಯರ ಗುಣವಾಗಿದೆ.

ಧರ್ಮೇಂದ್ರರು "ಅವರ ವರ್ತನೆಯಲ್ಲಿ ಅನುಕೂಲ ಅನಾನುಕೂಲಗಳೆರಡೂ ಇವೆ"[೫] ಎಂದು ಇಂಡಿಯಾದ ಚಿತ್ರವನ್ನು ಬಗೆಗಣ್ಣಿನ ಮುಂದೆ ತಂದುಕೊಳ್ಳುತ್ತಾರೆ. ಇಲ್ಲಿ ಧರ್ಮೇಂದ್ರರಿಗೆ ಭಾರತೀಯ ಸಂಪ್ರದಾಯ, ರೀತಿ-ನೀತಿಗಳು ಬಗ್ಗೆ ನೆನಪಾಗುತ್ತದೆ. ಮಾನವೀಯ ಸಂಬಂಧಗಳ ಮೌಲ್ಯ ಭಾರತೀಯರಲ್ಲಿ ಕಂಡುಬರುತ್ತದೆ.

---

[೪] ದೇ.ಜ.ಗೌ. ವಿಸ್ಮಯುಗಳ ನಾಡಿನಲ್ಲಿ ಪು. ೧೩.
[೫] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. ೧೩.

ಇಂಡಿಯಾದಲ್ಲಿ ನಡೆಯುವ ಖರ್ಜೂರದ ರಾಷ್ಟ್ರೀಯೋತ್ಸವ ವಿವರಗಳನ್ನು ಧರ್ಮೇಂದ್ರರವರು ತಿಳಿದುಕೊಂಡು ಅಲ್ಲಿಗೆ ಹೋದಾಗ ಅದು ಕರ್ನಾಟಕದಲ್ಲಿ ನಡೆಯುವ ಜಾತ್ರೆಗಳಂತಿರುತ್ತದೆ. ಚರ್ರಿ ವೃಕ್ಷ ಏಪ್ರಿಲ್ ತಿಂಗಳಲ್ಲಿ ಹೂ ಬಿಟ್ಟಾಗ ಅಂಥದೇ ಹಬ್ಬವನ್ನು ಆಚರಿಸುತ್ತಾರೆ. ಮತ್ತು ಅಣಬೆ ಉತ್ಸವಗಳನ್ನು ಆಚರಿಸುವುದನ್ನು ನೋಡಿದಾಗ, ಧರ್ಮೇಂದ್ರರಿಗೆ ನಮ್ಮ ಕೃಷಿ ಸಂಸ್ಕೃತಿಯ ನೆನಪಾಗುತ್ತದೆ. ನಮ್ಮಲ್ಲಿ ರೈತ ಬೆಳೆಯನ್ನು ಬೆಳೆದಾಗ ತಮ್ಮ ಹೊಲ, ಗದ್ದೆಗಳಲ್ಲಿ ದವಸಕ್ಕೆ ಪೂಜೆ ಮಾಡಿ, ಹಬ್ಬವನ್ನು ಮಾಡುವಂತೆ ಇಲ್ಲಿನ ಕೃಷಿ ಸಂಸ್ಕೃತಿಯನ್ನು ಕಂಡು ಅಚ್ಚರಿಪಡುತ್ತಾರೆ. ನಮ್ಮಲ್ಲಿ ಹುತ್ತರಿ ಹಬ್ಬ, ಸುಗ್ಗಿ ಹಬ್ಬದ ರೀತಿ ಇಲ್ಲಿನ ಉತ್ಸವಗಳು ನಡೆಯುತ್ತವೆ. ಇಲ್ಲಿ ಎಲ್ಲ ದೇಶದ ರೈತರಿಗೂ ತಾವು ಬೆಳೆದ ಬೆಳೆಯ ಮೇಲಿನ ಭಕ್ತಿ, ಸಂಭ್ರಮಗಳು ಒಂದೇ ರೀತಿಯಾಗಿರುವುದನ್ನು ಕಾಣಬಹುದು.

ಅಮೆರಿಕಾ ದೇಶದ ರೈತನ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ನಮ್ಮ ದೇಶದ ರೈತನಿಗಿಂತ ಉತ್ತಮವಾಗಿರುವುದು ಕಂಡುಬರುತ್ತದೆ. ರೈತ ತಾನು ಬೆಳೆದ ಬೆಳೆಗೆ ಸರಿಯಾದ ಬೆಲೆಯನ್ನು ಅಮೆರಿಕಾದಲ್ಲಿ ಪಡೆಯುತ್ತಾನೆ. ಧರ್ಮೇಂದ್ರರು ಬ್ಯೂಮಾಂಟ್ ಬಳಿಯ ಚರ್ರಿಯ ತೋಟಕ್ಕೆ ಹೋದಾಗ ಅಲ್ಲಿ ಹೋದವರು ತಾವೇ ಮರಹತ್ತಿ ಹಣ್ಣುಗಳನ್ನು ಕಿತ್ತು ನಂತರ ತೋಟದ ಮಾಲೀಕನ ಬಳಿಗೆ ಬಂದು ತೂಕ ಮಾಡಿಸಿ ಹಣ ನೀಡಿ ಹೋಗುತ್ತಾರೆ. ಇದರಿಂದ ತೋಟದ ಮಾಲೀಕನಿಗೆ ಅವನ ಬೆಳೆಗೆ ಸರಿಯಾದ ಬೆಲೆ ಮತ್ತು ಮಧ್ಯವರ್ತಿಗಳ ಹಾವಳಿ ತಪ್ಪಿ ಅವನಿಗೆ ನಷ್ಟವಾಗುವುದು ತಪ್ಪುತ್ತದೆ. ಆದರೆ ನಮ್ಮ ದೇಶದಲ್ಲಿ ರೈತನ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಅಧೋಗತಿಗೆ ಇಳಿದಿದೆ. ರೈತ ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದೆ ಮಧ್ಯವರ್ತಿಗಳ ಹಾವಳಿಯಿಂದ ಸರ್ಕಾರದ ನಿರ್ಲಕ್ಷ್ಯತನದಿಂದ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಹೀಗೆ ಅಮೆರಿಕಾದ ರೈತ ವರ್ತಕನಾಗಿ ಅವನು ತನ್ನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಂಡಿದ್ದಾನೆ. ಇದರಂತೆ ಕೃತಿ ಓದಿದಾಗ ನಮ್ಮ ದೇಶದ ರೈತನು ವರ್ತಕನಾಗಬೇಕು ಎಂಬ ಆಸೆ ಹುಟ್ಟುತ್ತದೆ.

ಅಮೆರಿಕಾದ ಜನರಿಗೆ ಮಕ್ಕಳೆಂದರೆ ಪಂಚಪ್ರಾಣ. ಮಕ್ಕಳನ್ನು ಮತ್ತು ಸಾಕು ಪ್ರಾಣಿಗಳನ್ನು ಪ್ರೀತಿಯಿಂದ, ಎಚ್ಚರಿಕೆಯಿಂದ ಅವುಗಳಿಗೆ ಸ್ವಲ್ಪವೂ ನೋವಾಗದಂತೆ ನೋಡಿಕೊಳ್ಳಬೇಕೆಂದು ಅಮೆರಿಕೆಯ ಸಂಪ್ರದಾಯ. ಅವರಿಗೆ ಮಕ್ಕಳ ಮೇಲೆ ಅತಿಯಾದ ವ್ಯಾಮೋಹ ಅದಕ್ಕಾಗಿ ಅವರು ಎಲ್ಲ ಕಡೆಯಲ್ಲಿಯೂ ಮಕ್ಕಳಿಗಾಗಿ ಪ್ರತ್ಯೇಕವಾದ ವ್ಯವಸ್ಥೆಯನ್ನು ಮಾಡಿರುತ್ತಾರೆ. ಉದ್ಯಾನವನ ಡಿಪಾರ್ಟಮೆಂಟಲ್ ಸ್ಟೋರ್, ಹೋಟೆಲ್ ಎಲ್ಲ ಕಡೆ ಅವರ ವಯಸ್ಸಿಗೆ ಅನುಗುಣವಾಗುವಂತೆ

ವ್ಯವಸ್ಥೆಯನ್ನು ಮಾಡಿರುತ್ತಾರೆ. ಮತ್ತು ಮಕ್ಕಳ ಬೌದ್ಧಿಕ ಮಟ್ಟ ಹೆಚ್ಚಾಗುವಂತೆ ಮಾಡಲು ಅನೇಕ ರೀತಿಯ ಆಟದ ಸಾಮಾನು, ಉಪಕರಣಗಳನ್ನು ಮಕ್ಕಳಿಗೆ ಒದಗಿಸುತ್ತಾರೆ. ಅಮೆರಿಕಾದ ಸಾಮಾಜಿಕ ವ್ಯವಸ್ಥೆಯಲ್ಲಿ ತಂದೆ-ಮಕ್ಕಳ ಸಂಬಂಧ ನಿಕಟವಾಗಿರುವುದಿಲ್ಲ. ತಂದೆ-ತಾಯಿಗಳ ಜೊತೆ ವಯಸ್ಕ ಮಕ್ಕಳು ಇರಲು ಇಷ್ಟಪಡುವುದಿಲ್ಲ. ಅವರು ಸ್ವತಂತ್ರರಾಗಿರಲು ಬಯಸುತ್ತಾರೆ. ಭಾರತೀಯರಂತೆ ಮಕ್ಕಳು ತಂದೆ-ತಾಯಿಯರ ಸಂಬಂಧದೊಡನೆ ನಿಕಟವಾಗಿರುವುದಿಲ್ಲ ಎಂಬುದನ್ನು ಕಾಣಬಹುದಾಗಿದೆ.

ಸಾಕು ಪ್ರಾಣಿಗಳನ್ನು ಮುದ್ದಿನಿಂದ ಸಾಕುತ್ತಾರೆ. ಅವುಗಳನ್ನು ಹೊರಗೆ ಕರೆದುಕೊಂಡು ಹೋದಾಗ ಅವುಗಳು ಗಲೀಜು ಮಾಡಿದರೆ ಅದನ್ನು ಸ್ವಚ್ಛಮಾಡಲು ಸಲಕರಣೆಗಳನ್ನು ಜೊತೆಯಲ್ಲಿಯೇ ತೆಗೆದುಕೊಂಡು ಹೋಗುತ್ತಾರೆ. ಇದು ಅವರಿಗೆ ಸ್ವಚ್ಛತೆಯ ಬಗ್ಗೆ ಇರುವ ಜ್ಞಾನವನ್ನು ತಿಳಿಸುತ್ತದೆ. ಪರಿಸರವನ್ನು ಸುಂದರವಾಗಿರಿಸಿಕೊಳ್ಳುವುದನ್ನು ಕಾಣಬಹುದು. ಇದು ಅವರ ಶುಚಿ, ಶುದ್ಧತೆಯನ್ನು ತೋರಿಸಿ ಕೊಡುತ್ತದೆ.

ಅಮೆರಿಕಾದಲ್ಲಿ ಸೇವಕ-ಮಾಲೀಕರೆಂಬ ಭೇದಭಾವ ಕಾಣಬರುವುದಿಲ್ಲ ಎಂಬ ಅಂಶವನ್ನು ಲೇಖಕರು ತಿಳಿಸುತ್ತಾರೆ. ಇಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳುವಾಗ ಯಾವ ಕೆಲಸಕ್ಕೆ ನೇಮಿಸಿಕೊಂಡಿದ್ದಾರೆ ಅಷ್ಟೇ ಕೆಲಸವನ್ನು ಅವರು ಮಾಡುತ್ತಾರೆ. ಅದಕ್ಕೆ ತಕ್ಕಂತೆ ಸಂಬಳವನ್ನು ಪಡೆಯುತ್ತಾರೆ. ನಮ್ಮಲ್ಲಿರುವಂತೆ ಮಾಲೀಕ ಕೊಟ್ಟ ಕಡಿಮೆ ಸಂಬಳಕ್ಕೆ ದಿನವೆಲ್ಲ ದುಡಿಯುವ ರಗಳೆಯಿಲ್ಲ ಎಂಬುದನ್ನು ಲೇಖಕರು ಸೂಕ್ಷ್ಮವಾಗಿ ವಿವರಿಸುತ್ತಾರೆ.

ಅಮೆರಿಕಾದ ಸಾಮಾಜಿಕ ಪದ್ಧತಿಯಲ್ಲಿ ವಿವಾಹ ವಿಚ್ಛೇದನ ಪ್ರಮುಖ ಅಂಶವಾಗಿದೆ. ಇಲ್ಲಿ ಸತಿಪತಿಗಳು ಹೊಂದಾಣಿಕೆಯಿಲ್ಲದೆ ದುಃಖಕ್ಕೊಳಗಾಗಿ ತಮ್ಮ ಬದುಕನ್ನು ಕತ್ತಲೆಯಲ್ಲಿ ಕಳೆಯಲು ಇಷ್ಟಪಡದೆ ವಿಚ್ಛೇದನ ಪಡೆದು ಬೇರೆ ಬೇರೆಯಾಗಿ ಸಂತೋಷದಿಂದ ಬದುಕುವ ದಾರಿಯನ್ನು ಕಂಡುಕೊಳ್ಳುತ್ತಾರೆ. ಅಮೆರಿಕಾದಲ್ಲಿ ಕಾಮುಕ ಜೀವನ ಯಾವುದೇ ಮುಚ್ಚುಮರೆಯಿಲ್ಲದೆ ನಡೆಯುತ್ತದೆ. ಬೇರೆ ದೇಶಗಳಲ್ಲಿ ಕದ್ದುಮುಚ್ಚಿ ನಡೆದರೆ ಇಲ್ಲಿ ಬಹಿರಂಗವಾಗಿ ನಡೆಯುತ್ತದೆ. ಅದಕ್ಕಾಗಿಯೇ ಅನೇಕ ಕ್ಲಬ್ಬುಗಳಿವೆ. ಪ್ರದರ್ಶನಾಲಯಗಳಿವೆ. ಇದು ಇಲ್ಲಿನ ಗುಣವೂ ಅಹುದು, ದೌರ್ಬಲ್ಯವೂ ಅಹುದು ಎಂಬುದನ್ನು ತಿಳಿಸುತ್ತದೆ. ದಾಂಪತ್ಯ ಜೀವನದ ಭಾವನಾತ್ಮಕ ಸಂಬಂಧಗಳು ಕಂಡುಬರುವುದಿಲ್ಲ. ಸಲಿಂಗರತಿ, ಪ್ರೌಢಶಾಲೆಯ ವಿದ್ಯಾರ್ಥಿಗಳು ಲೈಂಗಿಕ ಕ್ರಿಯೆಯಲ್ಲಿ ತೊಡಗುವುದು ಇಲ್ಲಿ ಸಹಜವಾಗಿದೆ. ಇಂಥ

ಸಂಪ್ರದಾಯಗಳು ಅನೇಕ ದುಷ್ಪರಿಣಾಮಗಳನ್ನು ಸಮಾಜದಲ್ಲಿ ಉಂಟು ಮಾಡುತ್ತದೆ. ಆದರೆ ಇದು ಸರಿ ತಪ್ಪು ಎಂದು ಹೇಳುವುದು ಯಾರಿಂದಲೋ ಸಾಧ್ಯವಾಗಿಲ್ಲ. ಲೈಂಗಿಕ ಸಂಬಂಧಗಳು ಯಾವ ದೇಶ ಎಂಬ ಭೇದ ಬಾವವಿಲ್ಲದೆ ಕಂಡುಬರುತ್ತದೆ. ಕಾಮತೃಷೆ ಎಂಬುದು ಮಾನವನ ಸಹಜ ಪ್ರವೃತ್ತಿಗಳೆಂದೂ, ಆದರೆ ಅದನ್ನು ಗೆದ್ದು ನಿಲ್ಲಬೇಕು ಸಂಯಮ, ತಾಳ್ಮೆಯಿರಬೇಕು. ಲೈಂಗಿಕತೆಯೇ ಬದುಕಿನ ಪ್ರಮುಖ ಅಂಶವಾಗಬಾರದು.

ಧರ್ಮೇಂದ್ರರಿಗೆ ಅಮೆರಿಕಾದ ರೈತರನ್ನು ಸಂಧಿಸಿ ಮಾತನಾಡುವ ಬಯಕೆಯುಂಟಾಗಿ ಕುಮಾರ ಸ್ವಾಮಿಯವರಿಗೆ ತಿಳಿಸಲು ಅವರು ರೈತರನ್ನು ಮಾತನಾಡಿಸಲು ಹೋದಾಗ ಅವರು "ಹಳ್ಳಿಯ ಜನ ಆಸ್ಪತ್ರೆಗೆ ಬಂದಾಗ ಅವರ ಮನೆಯ ಕಾರುಬಾರುಗಳ ಬಗ್ಗೆ ವಿಚಾರಿಸುತ್ತೇನೆ. ಅವರಿಗೆ ಓದು ಬರಹ ಬರುವುದಾದರೂ, ಅವರ ಜ್ಞಾನದ ಮಟ್ಟ ತುಂಬ ಕಡಿಮೆ. ನಗರದ ಜನರಿಗೆ ಹೋಲಿಸುವುದಾದರೆ ಅವರು ಪೆದ್ದರೆಂದೇ ಹೇಳಬೇಕು. ಆದ್ದರಿಂದ ನಗರದ ಜನ ಅವರನ್ನು ಕೀಳಾಗಿ ಕಾಣುತ್ತಾರೆ."[೬] ಎಂದು ಕುಮಾರಸ್ವಾಮಿ ಅಲ್ಲಿಯ ಹಳ್ಳಿಯ ಬದುಕನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ.

ರೈತನ ಸಾಮಾಜಿಕ ಸ್ಥಿತಿಗತಿ ಭಾರತಕ್ಕಿಂತ ಭಿನ್ನವಾಗಿದೆ, ಉತ್ತಮವಾಗಿದೆ. ನಯವಿನಯಗಳ ಸಂಸ್ಕಾರವಂತರು, ಮಾಲಿನ್ಯರಹಿತವಾದ ವಾತಾವರಣ, ಶಾಲೆಗಳು, ಕಣಜಗಳು, ಆಧುನಿಕ ಸೌಲಭ್ಯ ಸಲಕರಣೆಗಳನ್ನು ನೋಡಿದ ಧರ್ಮೇಂದ್ರರಿಗೆ ಭಾರತದ ರೈತರನ್ನು ನೆನಪಿಸಿಕೊಂಡು, ಅಲ್ಲಿನ ರೈತರನ್ನು ಕಂಡಾಗ ರುಬ್ಬುವಂತಾಗುತ್ತದೆ. ರೈತನ ಬದುಕು ಹಸನಾಗಲು ಅಲ್ಲಿನ ಮೂಲಭೂತ ಸೌಕರ್ಯ, ಆಧುನಿಕ ಸಲಕರಣೆಗಳ ಬಳಕೆ, ಬೆಲೆಯ ಮಟ್ಟ, ಅವರಿಗೆ ಉತ್ತಮ ಬದುಕನ್ನು ಕಟ್ಟಿಕೊಳ್ಳಲು ಅಲ್ಲಿನ ವ್ಯವಸ್ಥೆಪೂರಕವಾಗಿದೆ. ನಮ್ಮ ದೇಶದ ರೈತರ ಬವಣೆಯನ್ನು ಉತ್ತಮಪಡಿಸುವ ಇರಾದೆ ಯಾರಿಗೂ ಇಲ್ಲವಾಗಿದೆ. ಅಮೆರಿಕಾದ ಜನ ಯಾವುದನ್ನೇ ಆಗಲಿ ಪ್ರಾಯೋಗಿಕವಾಗಿ ಮಾಡುವ ಮನೋಭಾವದವರು. ಶಿಷ್ಟ ನಾಗರೀಕ ಜೀವನ ನಡವಳಿಕೆಗಳನ್ನು ಕಾಣಬಹುದು.

ಅಮೆರಿಕಾದ ಜನತೆಯ ನಿಸರ್ಗ ಪ್ರೇಮದ ಪರಿಚಯವನ್ನು ಕೃತಿಯಲ್ಲಿ ಲೇಖಕರು ಪಡಿಮೂಡಿಸುತ್ತಾರೆ. ಅಲ್ಲಿನ ಸ್ವಚ್ಛತೆ, ಶುದ್ಧತೆ ಅಲ್ಲಿ ಪ್ರಾಣಿಗಳು ಯಾವ ಭಯವಿಲ್ಲದೆ ಇರುವುದು, ಸಾಕುಪ್ರಾಣಿಗಳ ಪ್ರೇಮವನ್ನು ಕೃತಿಯುದ್ಧಕ್ಕೂ ಕಾಣಬಹುದಾಗಿದೆ.

ಅಮೆರಿಕಾ ದೇಶದಲ್ಲೂ ಕ್ರಿಸ್ತಮತ ಪ್ರಬಲವಾಗಿರುವ, ವಿಜ್ಞಾನದ ಯುಗದಲ್ಲಿ ನಾಗಾಲೋಟದಲ್ಲಿ ಓಡುತ್ತಿರುವ ದೇಶದಲ್ಲೂ ಕೂಡ ಮೂಢ ನಂಬಿಕೆಗಳು, ಪುನರ್ಜನ್ಮದ ಕಲ್ಪನೆಗಳನ್ನು ಕಾಣಬಹುದಾಗಿದೆ. ಮೂಢ ನಂಬಿಕೆಯನ್ನು ಸೃಜಿಸದ ಪೋಷಿಸದ ಪ್ರೋತ್ಸಾಹಿಸದ ಮತಗಳೇ ಇಲ್ಲ"[೭] ಎಂದು ಲೇಖಕರು ಹೇಳುವಂತೆ ವಿಜ್ಞಾನ ಎಷ್ಟೇ ಮುಂದುವರಿದರೂ ಜನರ ಮೂಢನಂಬಿಕೆಗಳು, ಸಂಪ್ರದಾಯಗಳು ಇವುಗಳು ಮರೆಯಾಗುವುದಿಲ್ಲ. ಅಮೆರಿಕಾದಲ್ಲಿ ಎಲ್ಲ ಧರ್ಮಗಳ ದೇವಸ್ಥಾನಗಳನ್ನು ಕಾಣಬಹುದಾಗಿದೆ. ಅಮೆರಿಕಾದ ಜನತೆ ಬೇರೆ ದೇಶಗಳಿಂದ ವಲಸೆ ಹೋದವರೇ ಹೆಚ್ಚಾಗಿದ್ದಾರೆ. ಅವರ ನಂಬಿಕೆ, ಧರ್ಮಗಳಿಗೆ ತಕ್ಕಂತೆ ದೇವಸ್ಥಾನಗಳನ್ನು ನಿರ್ಮಿಸಿಕೊಳ್ಳಲು ಅಲ್ಲಿ ಅವಕಾಶವಿದೆ. ಪಿಟ್ಸ್‌ಬರ್ಸ್‌ನಲ್ಲಿ ಸ್ಥಾಪನೆಗೊಂಡಿರುವ ಶ್ರೀ ವೆಂಕಟೇಶ್ವರ ದೇವಸ್ಥಾನದ ಬಗ್ಗೆ ತಿಳಿಸುತ್ತಾರೆ. ಅಲ್ಲಿನ ಗುಡಿಯ ಸುತ್ತಲಿನ ಸ್ವಚ್ಛತೆ, ಕಸಕಡ್ಡಿಯಿಂದ ಕೂಡಿರದೆ ಶುದ್ಧವಾಗಿರುವುದು, ಸುತ್ತ ಹಸುರಿನ ಉದ್ಯಾನವನಗಳು ಇವುಗಳು ಕಂಡುಬರುವುದು. ಕೃತಿಯಲ್ಲಿ ಕಾಣಬಹುದು ಧರ್ಮೇಂದ್ರರಿಗೆ ದೇವರಲ್ಲಿ ಭಕ್ತಿ ಇಲ್ಲದಿದ್ದರೂ ನಮ್ಮ ದೇಶದ ದೇವಾಲಯಗಳ ಸುತ್ತಮುತ್ತಲ ಪರಿಸ್ಥಿತಿಗೆ ಇಲ್ಲಿನ ವಾತಾವರಣವನ್ನು ಗಮನಿಸುತ್ತಾರೆ. "ದೇವರಿಲ್ಲವೆಂಬ ಸತ್ಯವನ್ನು ನಾನೆಂದೋ ಕಂಡುಕೊಂಡೆ. ಆದರೆ ನಾನು ವಿಶ್ವಚಿತ್ ಶಕ್ತಿಯಲ್ಲಿ ನಂಬಿಕೆಯುಳ್ಳವನು"[೮] ಎಂದು ಹೇಳುತ್ತಾರೆ. ದೇವಾಲಯಗಳು ಶೋಷಣೆಯ ಕೇಂದ್ರಗಳಾಗದೆ ಮುಕ್ತವಾಗಿ ಎಲ್ಲರ ಏಳಿಗೆಗೆ ಸಮಾಜದ ಐಕ್ಯತೆಗೆ ಸಂಕೇತಗಳಾಗಬೇಕು. ಮಾನವೀಯ ಮೌಲ್ಯಗಳ ಪ್ರಸಾರ ಕೇಂದ್ರವಾಗಬೇಕು ಎಂಬುದು ಧರ್ಮೇಂದ್ರರ ಅಭಿಪ್ರಾಯವಾಗಿದೆ.

ಸ್ಯಾಂಡೀಯಾದ ಸಾಗರ ಲೋಕದಲ್ಲಿ ಜಲಚರ ಪ್ರಾಣಿಗಳ ಸರ್ಕಸ್ ಅವುಗಳನ್ನು ತರಬೇತಿಗೊಳಿಸಿ ಮಾನವನು ತಾನು ಹೇಳಿದಂತೆ ಕೇಳುವಂತೆ ಮಾಡಿರುವ ನೈಪುಣ್ಯತೆಯನ್ನು, ತಿಮಿಂಗಲ, ಸೀಲ್ ಪ್ರಾಣಿಗಳ ನರ್ತನದಲ್ಲಿ ಕಾಣಬಹುದು. ಈ ಜಲಚರಗಳ ನರ್ತನ ಕಂಡು ಧರ್ಮೇಂದ್ರರು ಮತ್ತು ಮನೆಯವರು ಮೈಮರೆತು ನೋಡುತ್ತಾರೆ. ಮತ್ತು ಪ್ರಾಣಿ ಮತ್ತು ಪಕ್ಷಿಗಳ ಬಗ್ಗೆ ಅಪಾರವಾದ ಪ್ರೀತಿಯನ್ನು ಕಾಣಬಹುದು.

ಅಮೆರಿಕಾದ ಒಂದು ಸಂಪ್ರದಾಯವೆಂದರೆ ವಯಸ್ಸಾದ ಹಿರಿಯರನ್ನು ಗೌರವದಿಂದ ಕಾಣುವುದು. "ಇಂಗ್ಲೆಂಡು, ಅಮೆರಿಕ ಮುಂತಾದ ರಾಷ್ಟ್ರಗಳಲ್ಲಿ ಮಕ್ಕಳು ತಂದೆ ತಾಯಿಗಳನ್ನು

---

[೬] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೫೧.
[೭] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೬೩.
[೮] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೮೦.

ತುಂಬ ತಿರಸ್ಕರಿಸುತ್ತಾರೆ. ವೃದ್ಧಾಪ್ಯದಲ್ಲಿ ಅವರ ಕಡೆ ನೋಡುವುದೇ ಇಲ್ಲ"[೯] ಎಂದು ನಾನು ಕೆಲವರಂತೆ ಭಾವಿಸಿದ್ದೆ ಎಂದು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಅಮೆರಿಕಾದಲ್ಲಿ ಗೊರೂರು ಕೃತಿಯಲ್ಲಿ ಹೇಳುತ್ತಾರೆ. ಯಾವುದೇ ಪ್ರವಾಸಿ ಸ್ಥಳಗಳಲ್ಲಿಗೆ ಹೋದರೆ ಅಲ್ಲಿ ಹಿರಿಯರಿಗೆ ರಿಯಾಯಿತಿ ದೊರೆಯುತ್ತದೆ. ಸರ್ಕಸ್, ಸಾಗರ ಲೋಕ, ಸಿನಿಮಾಗೃಹ, ಸಂಗೀತ ಕಛೇರಿ ಯಾವುದೇ ಸ್ಥಳಕ್ಕೂ ಹೋದರೂ ಅವರಿಗೆ ರಿಯಾಯಿತಿ ದೊರೆಯುವುದನ್ನು ಕಂಡು ಧರ್ಮೇಂದ್ರ ಅಚ್ಚರಿ ಪಡುತ್ತಾರೆ. ಹಿರಿಯರು ನಾಡಿನ ಪ್ರಮುಖರು ಮತ್ತು ಮಕ್ಕಳು ದೇಶದ ಮುಂದಿನ ಪ್ರಜೆಗಳಾದ್ದರಿಂದ ಅವರ ರಕ್ಷಣೆ ಆದ್ಯ ಕರ್ತವ್ಯವೆಂದು ಅಮೆರಿಕನ್ನರು ತಿಳಿದುಕೊಂಡು ಅವರನ್ನು ಸರ್ವಸೌಖ್ಯವಾಗಿ ಸಲಹುತ್ತಾರೆ ಎಂಬುದನ್ನು ಲೇಖಕರು ಕೃತಿಯಲ್ಲಿ ವಿವರಿಸುವುದನ್ನು ಓದಿದಾಗ ಮನ ಆದೇಶದ ಜನತೆಯ ಸಂಪ್ರದಾಯವನ್ನು ನಾವು ಗೌರವಿಸಬೇಕು ಅವರಂತೆ ಹಿರಿಯರಿಗೆ ಗೌರವ ಕೊಡುವುದನ್ನು ಕಲಿಯಬೇಕೆಂಬ ಭಾವನೆಯುಂಟಾಗುತ್ತದೆ.

ಅಮೆರಿಕಾದ ಜನತೆಯ ಉಡುಗೆ–ತೊಡುಗೆಯನ್ನು ಮತ್ತು ಅವರ ಮುಕ್ತ ಜೀವನ ಶೈಲಿಯನ್ನು ಕೃತಿಯಲ್ಲಿ ಕಾಣಬಹುದಾಗಿದೆ. ಅವರ ಬಟ್ಟೆ ಬರೆಗಳಲ್ಲಿ ಯಾವುದೇ ಸಂಪ್ರದಾಯ ನಿಷ್ಠತೆಯು ಕಂಡುಬರುವುದಿಲ್ಲ. ತಮಗೆ ಯಾವುದು ಆರಾಮದಾಯಕವಾಗಿದೆ ಅಂತಹ ಉಡುಪುಗಳನ್ನು ಅವರು ಧರಿಸುತ್ತಾರೆ. ಅವರ ಉಡುಪುಗಳಲ್ಲಿ ಅದರಲ್ಲೂ ಮಹಿಳೆಯ ಉಡುಪುಗಳಲ್ಲಿ ಅರನಗ್ನತೆಯ ಉಡುಪುಗಳೇ ಹೆಚ್ಚಾದರೂ ಇದರ ಬಗ್ಗೆ ಅಲ್ಲಿ ಮುಚ್ಚು ಮರೆಯಿಲ್ಲ. ಮತ್ತು ಅವರ ಉಡುಪುಗಳನ್ನು ಟೀಕಿಸುವ ಹಕ್ಕು ಯಾರಿಗೂ ಇರುವುದಿಲ್ಲ. ಪ್ರತಿಯೊಂದು ದೇಶದ ಜನರಿಗೆ ಅವರ ಉಡುಗೆ–ತೊಡುಗೆ ಅವರಿಗೆ ಹವಾಮಾನಕ್ಕೆ ತಕ್ಕಂತೆ ಹಿತವಾಗಿರುತ್ತದೆ. ಅವು ಅಸಹ್ಯ ಎಂದು ಟೀಕಿಸುವ ಹಕ್ಕು ಯಾರಿಗೂ ಇಲ್ಲ ಎಂದು ಲೇಖಕರು ಹೇಳುತ್ತಾರೆ. ಮತ್ತು ಅಲ್ಲಿ ಯುವಕ–ಯುವತಿಯರು ಯಾವ ಸಂಕೋಚವಿಲ್ಲದೆ ಅವರಿಗೆ ಇಷ್ಟಪಟ್ಟವರ ಜೊತೆ ಅಪ್ಪಿಕೊಳ್ಳುವುದು ಇವೆಲ್ಲ ಈ ಲೋಕದ ಸಹಜ ವ್ಯಾಪಾರವೆಂಬಂತೆ ಸಹಜವಾಗಿ ವರ್ತಿಸುತ್ತಾರೆ. ಇಲ್ಲಿನ ಮುಕ್ತ ಲೈಂಗಿಕತೆಯನ್ನು ಕೃತಿಯಲ್ಲಿ ತಿಳಿಸುತ್ತಾರೆ. ಈ ಘಟನೆಗಳಿಂದ ಅಲ್ಲಿನ ಸಾಂಸ್ಕೃತಿಕತೆಯ ಮತ್ತು ಅಮೆರಿಕಾದ ಜನತೆಯ ಭೋಗವಿಲಾಸ ಜೀವನದ ಚಿತ್ರಣ ತಿಳಿದು ಬರುತ್ತದೆ. ಆದರೆ ಅವರ ಸಾಮಾಜಿಕ ಜೀವನದ ಹೆಚ್ಚಿನ ವಿವರಗಳು ಕಂಡುಬರುವುದಿಲ್ಲ.

---

[೯] ಗೊರೂರು ರಾಮಸ್ವಾಮಿ ಅಯ್ಯಂಗಾರ್ – ಅಮೆರಿಕಾದಲ್ಲಿ ಗೊರೂರು, ಪು. ೨೬೭.

ಅಮೆರಿಕಾದ ಜನತೆ "ಎಲ್ಲೆಂದರಲ್ಲಿ ಜೀವವಿರುವ ಇಲ್ಲದಿರುವ ಯಾವ ವಸ್ತುವೇ ಆಗಲಿ, ಅವುಗಳಲ್ಲಿ ಏನಾದರೂ ವಿಶೇಷವನ್ನು ಗುರುತಿಸಿ. ಅದನ್ನು ಪ್ರೇಕ್ಷಣೀಯ ವಸ್ತುವಾಗಿ ಪರಿವರ್ತಿಸಿ ಸಾಮಾನ್ಯವಾದದ್ದನ್ನು ಅಸಾಮಾನ್ಯಕ್ಕೆತ್ತಿ, ಜಡದಲ್ಲಿ ಚೈತನ್ಯವನ್ನು, ಚೈತನ್ಯದಲ್ಲಿ ಅದ್ಭುತವನ್ನು ತುಂಬಿ ಪ್ರವಾಸಿಗರನ್ನು ಆಕರ್ಷಿಸುವ ಕಲ್ಪನಾ ಸಾಮರ್ಥ್ಯ ನಿಸರ್ಗಪ್ರಿಯ ಅಮೆರಿಕಾದ ಜನರಲ್ಲಿ ಅಪಾರ ಪ್ರಮಾಣದಲ್ಲಿದೆ."[೧೦] ಇಲ್ಲಿನ ಬಹುಪಾಲು ಪ್ರವಾಸಿ ಕೇಂದ್ರಗಳು ಖಾಸಗಿ ಒಡೆತನದಲ್ಲಿರುವುದರಿಂದ ಜನರಿಗೆ ಮನರಂಜನೆ ಒದಗಿಸಿ ಅವರಿಂದ ಶುಲ್ಕ ಪಡೆದು ದೇಶದ ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಸದೃಢವಾಗಲು ಕಾರಣವಾಗಿರುವುದನ್ನು ಓದುಗರಿಗೆ ತಿಳಿಸಿಕೊಡುತ್ತಾರೆ.

ಹವಾಯಿ ದ್ವೀಪದ ಬುಡಕಟ್ಟು ಜನಾಂಗದ ಜೀವನ ಆಚಾರ–ವಿಚಾರಗಳು, ಬುಡಕಟ್ಟಿನ ಜನರ ಸರ್ವಚೇತನವಾದಿಗಳಾಗಿ, ಸಚರಾಚರ ವಸ್ತುಗಳಲ್ಲಿ ತಮ್ಮ ಇಷ್ಟ ದೈವವನ್ನು ಕಂಡುಕೊಂಡಿದ್ದನ್ನು ಅಲ್ಲಿನ ಸಂಪ್ರದಾಯವನ್ನು ವಿವರಿಸುತ್ತಾರೆ.



'ವಿಸ್ಮಯಗಳ ನಾಡಿನಲ್ಲಿ' ದೇ.ಜ.ಗೌ.ರವರು ಅಮೆರಿಕ ಜನರ ಭೋಗ ಜೀವನ, ಅಲ್ಲಿನ ಸಾಂಸ್ಕೃತಿಕ ವಾತಾವರಣ ಮುಕ್ತ ಲೈಂಗಿಕ ಸ್ವಾತಂತ್ರ್ಯ ಮತ್ತು ಜೂಜುಕಟ್ಟೆಗಳ ಬಗ್ಗೆ ವಿವರಿಸುತ್ತಾರೆ. ಲಾಸ್ ವೇಗಸ್‌ನ ಜೂಜು ಕಟ್ಟೆಗಳು ಯಾವುದೇ ನಿರ್ಬಂಧವಿಲ್ಲದೆ ಮುಕ್ತವಾಗಿ ನಡೆಯುವುದನ್ನು ವಿವರಿಸುತ್ತಾರೆ. ಲೇಖಕರು ಆಟವಾಡಲು ಹೋಗಿ ಹಣವನ್ನು ಕಳೆದುಕೊಂಡ ಬಗ್ಗೆ ಹಾಸ್ಯ ಮಿಶ್ರಿತವಾಗಿ ತಿಳಿಸುತ್ತಾರೆ. ಅಲ್ಲಿನ ಜನರ ಶ್ರೀಮಂತಿಕೆಯ ವೈಭೋಗವನ್ನು ತಿಳಿಸಿಕೊಡುತ್ತಾರೆ.

ಅಮೆರಿಕಾದಲ್ಲಿ ಜೂಜು ಮತ್ತು ಮೋಜಿಗಾಗಿಯೇ ಎರಡು ಪ್ರಮುಖ ನಗರಗಳಿವೆ ಒಂದು ಲಾಸ್‌ವೆಗಾಸ್ ಮತ್ತು ಅಟ್ಲಾಂಟಿಕ್ ನಗರ ಜನರು ಅಲ್ಲಿ ಹೋಗಿ ಜೂಜಾಡಿ, ಕುಡಿತ, ಕುಣಿತಗಳಲ್ಲಿ ಮೈಮರೆತು ಮೋಜು ಅನುಭವಿಸುತ್ತಾರೆ.

ಅಮೆರಿಕಾದ ಜನರ ಆಹಾರ ಪದ್ಧತಿಯನ್ನು ಕೃತಿಯಲ್ಲಿ ಕಾಣಬಹುದಾಗಿದೆ. ಅಲ್ಲಿನ ಜನರು ಸಸ್ಯಾಹಾರಕ್ಕಿಂತ ಹೆಚ್ಚಾಗಿ ಮಾಂಸಹಾರ ಪ್ರಿಯರು ಎಂಬುದು ತಿಳಿದುಬರುತ್ತದೆ. ಯಾವುದೇ ಹೋಟೆಲ್‌ಗೆ ಹೋದರು ಅಲ್ಲಿ ಮಾಂಸಹಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇರುತ್ತದೆ ಮತ್ತು ಎಲ್ಲ ತರಹದ ಮಾಂಸದ ಭಕ್ಷ್ಯ ಭೋಜನಗಳು ದೊರೆಯುತ್ತದೆ. ಪ್ರಾಣಿ, ಮೀನುಗಳ

---

[೧೦] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೧೦.

ವಿವಿಧ ರೀತಿಯ ಭಕ್ಷ್ಯಗಳ ಪರಿಚಯ ಅದರ ಸ್ವಾದಿಷ್ಟ ರುಚಿ ಇವುಗಳ ಬಗ್ಗೆ ಲೇಖಕರು ವರ್ಣಿಸುವಾಗ ಓದುಗನು ತಾನು ಕೂಡ ಅದರ ರುಚಿಯನ್ನು ಸವಿಯಬೇಕು ಎನಿಸುತ್ತದೆ. ಆದರೆ ಸವಿತಾದೇವಿಯವರು ಹೆಚ್ಚಾಗಿ ಸಸ್ಯಾಹಾರವನ್ನು ಬಯಸುತ್ತಾರೆ. ಒಂದೊಂದು ಸಾರಿ ಅವರು ಬರಿ ಹಣ್ಣುಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ಮಾಂಸಹಾರ ಪ್ರಿಯರಿಗೆ ರಸದೌತಣವನ್ನು ಅಮೆರಿಕಾದ ಹೋಟೇಲ್‌ಗಳು ಉಣಬಡಿಸುತ್ತವೆ ಎಂಬುದು ತಿಳಿದು ಓದುಗನಿಗೆ ಬಾಯಲ್ಲಿ ನೀರೂರಿಸುತ್ತದೆ.

ಹೀಗೆ ಅಮೆರಿಕಾದ ಜನರ ನಡವಳಿಕೆ ಸ್ವಾತಂತ್ರ್ಯ ಪ್ರವೃತ್ತಿ ಹಾಗೂ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಪರಿಚಯ ಅವರು ಅತಿಥಿಗಳನ್ನು ಸ್ವಾಗತಿಸುವ ಹಿರಿಯರನ್ನು ಗೌರವಿಸುವ ಮಕ್ಕಳನ್ನು ಪ್ರೀತಿಸುವ ಗುಣಗಳು ಮತ್ತು ಅವರ ಅವಗುಣಗಳು, ಸಾಕುಪ್ರಾಣಿಗಳ ಮೇಲಿನ ಪ್ರೇಮ, ಭೋಗವಿಲಾಸ, ರಸಿಕತೆಯ ಜೀವನ ಮೋಜಿನ ಸ್ಥಳಗಳು ಇವು ಕೃತಿಯಲ್ಲಿ ಅಮೆರಿಕಾದ ಜೀವನ ತಿಳಿದುಕೊಳ್ಳಲು ಸಹಾಯಕವಾಗುತ್ತದೆ.

ಹಾಗೆಯೇ ಅಮೆರಿಕಾ ದೇಶದಲ್ಲಿ ಬಡವರು, ನಿರುದ್ಯೋಗಿಗಳು, ಕೊಳಚೆ ಪ್ರದೇಶಗಳು ಇಲ್ಲವೆ ಇಲ್ಲ ಎಂದು ತಿಳಿಯಬಾರದು. ಮೆಕ್ಸಿಕೋ ಗಡಿಯೊಳಗಿನ ತಿವಾನ ನಗರದೊಳಗೆ ಸುತ್ತಾಡಿ ಹೊರಭಾಗ ದಾರಿಯಲಿ "ಪೆಟ್ಟಿಗೆಯಂಗಡಿಗಳ ತಳ್ಳುಗಾಡಿಯ ಮಾರಾಟಕಾರರ, ಹೇಸರಗತ್ತೆ ಗಾಡಿಗಳ, ಮುರಿದ ಮನೆಗಳು, ಕೊಳಕು ಚರಂಡಿ, ಬಚ್ಚಲುಗಳ, ಭಿಕ್ಷುಕರ, ಹಸ್ತಸಾಮುದ್ರಿಕರ, ನೊಣಗಳ, ಕೊಳಚೆಗೇರಿಗಳ, ಜನರ ನೂಕು ನುಗ್ಗಲಿನ ದೃಶ್ಯಗಳು ಕಣ್ಣಿಗೆ ರಾಚುತ್ತವೆ"[೧೧] ಎಂದು ಅಲ್ಲಿಯ ಕೆಟ್ಟ ವ್ಯವಸ್ಥೆ ಜನಜೀವನವನ್ನು ಚಿತ್ರಿಸುತ್ತಾರೆ.

ಅಮೆರಿಕಾದಲ್ಲಿ ಬರೀ ಶ್ರೀಮಂತಿಕೆಯ, ಭೋಗವಿಲಾಸದ ಜೀವನದ ಜನರಷ್ಟೇ ಅಲ್ಲ. ಅವರ ಜೊತೆಗೆ ನಮ್ಮ ದೇಶದಲ್ಲಿ ಇರುವಂತೆ ಮುರಿದ ಮನೆಗಳು, ಕೊಳಚೆಗೇರಿಗಳು ಇವೆ ಎಂಬುದು ಕೃತಿಯನ್ನು ಓದಿದಾಗ ತಿಳಿದುಬರುತ್ತದೆ. ಆದರೆ ಅವರು ಯಾವುದೋ ಒಂದು ಪ್ರದೇಶದಲ್ಲಿ ವಾಸವಾಗಿದ್ದಾರೆ. ಆದರೆ ನಮ್ಮಲ್ಲಿ ಪ್ರತಿರಸ್ತೆಗೆ ಐದಾರು ಜನ ಭಿಕ್ಷುಕರನ್ನು ಕಾಣುತ್ತೇವೆ. ಪ್ರತಿ ನಗರದಲ್ಲೂ ಕೂಡ ಕೊಳಗೇರಿಗಳನ್ನು ಕಾಣುತ್ತೇವೆ.

---

[೧೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೯೨.

ಅಮೆರಿಕಾ ದೇಶ 'ವಲಸಿಗರ ದೇಶ' ಆದರೂ ಕೂಡ ಅಲ್ಲಿಗೆ ಬಂದು ನೆಲಸಿದ ಬೇರೆ ದೇಶದ ಜನರು ತಮ್ಮ ಆಚಾರ-ಸಂಪ್ರದಾಯಗಳನ್ನು ಪಾಲಿಸಲು ಇಲ್ಲಿ ಮುಕ್ತ ಅವಕಾಶವನ್ನು ನೀಡಲಾಗಿದೆ. ಮತ್ತು ಯಾವ ಧರ್ಮದವರೇ ಆಗಲಿ ಅವರಿಗೆ ತಮ್ಮ ದೇವಸ್ಥಾನಗಳನ್ನು ಕಟ್ಟಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದಾರೆ. ಇಲ್ಲಿ ಯಾವುದೇ ತಾರತಮ್ಯವನ್ನು ಮಾಡುವುದಿಲ್ಲ. ಇದರಿಂದ ದೇಶದಲ್ಲಿ ಸಾಮಾಜಿಕವಾಗಿ ಐಕ್ಯತೆಯುಂಟಾಗುತ್ತಿದೆ. ಮತ್ತು ದೇಶದ ಅಭಿವೃದ್ಧಿಗೆ ಪೂರಕವಾಗುತ್ತದೆ. ಇದರಿಂದ ದೇಶದಲ್ಲಿ ಸಾಮರಸ್ಯ ಕಾಪಾಡಲು ಸಹಾಯಕವಾಗುತ್ತದೆ ಎಂಬುದು ತಿಳಿದುಬರುತ್ತದೆ.

## ೨. ನಿಸರ್ಗ ಸಿರಿ ಮತ್ತು ಸಂಪತ್ತಿನ ಸದ್ಬಳಕೆ

ಅಮೆರಿಕಾ ದೇಶವು ತನ್ನ ನಿಸರ್ಗ ಸಿರಿಯನ್ನು ಮತ್ತು ಸಂಪತ್ತಿನ ಸದ್ಬಳಕೆಯನ್ನು ಬೇರೆ ದೇಶಗಳಿಗಿಂತ ಹೆಚ್ಚಿನದಾಗಿ ಸಂಪೂರ್ಣ ವಿನಿಯೋಗಿಸಿಕೊಂಡು ದೇಶವು ಶ್ರೀಮಂತಿಕೆಯಿಂದ ಕೂಡಿರಲು ಸಾಧ್ಯವಾಗಿದೆ ಎಂಬುದನ್ನು ಕೃತಿಯಲ್ಲಿ ಲೇಖಕರು ವಿವರಿಸುತ್ತಾರೆ ಮತ್ತು ಅಮೆರಿಕದ ಸಂಪತ್ತಿಗೆ ನಿಸರ್ಗದ ಕೊಡುಗೆ ಒಂದು ಕಡೆಯಾದರೆ, ಅಲ್ಲಿಯ ಜನರು ತಮ್ಮ ಬುದ್ಧಿವಂತಿಕೆ ಮತ್ತು ಶ್ರಮದ ದುಡಿಮೆಯೂ ಕಾರಣವಾಗಿದೆ. ಇಲ್ಲಿ ಸೋಮಾರಿತನಕ್ಕೆ ಅವಕಾಶವಿಲ್ಲ. ಅವರಿಗೆ ಕೈತುಂಬ ಕೆಲಸವಿರುತ್ತದೆ. ವಾರದಲ್ಲಿ ಎರಡುದಿನ ಮಾತ್ರ ವಿಶ್ರಾಂತಿ ಪಡೆಯುತ್ತಾರೆ. ಇವರ ಈ ಕಠಿಣ ದುಡಿಮೆಯಿಂದ ಅಮೆರಿಕಾ ಶ್ರೀಮಂತ ದೇಶವಾಗಲು ಕಾರಣವಾಗಿದೆ.

ಧರ್ಮೇಂದ್ರರವರ ಮಗಳು ಮತ್ತು ಅಳಿಯ ಇರುವುದು ಅಮೆರಿಕಾದ ವೆಲ್ಸ್ ನಗರದಲ್ಲಿ. ಅದು ಒಂದು ಮರುಭೂಮಿಯ ಪ್ರದೇಶದಲ್ಲಿರುವ ನಗರ. ಇಂಡಿಯನ್ ವೆಲ್ಸ್ ನಗರದಲ್ಲಿ ಅನೇಕ ಕಂಟ್ರಿಕ್ಲಬ್ಬುಗಳಿವೆ. ಒಬ್ಬ ವ್ಯಾಪಾರಿ ನೂರಾರು, ಸಾವಿರಾರು ಎಕರೆ ಪ್ರದೇಶ ಖರೀದಿಸಿ ಅಲ್ಲಿ ಮನೆ, ಉದ್ಯಾನವನ್ನು ಕೃತಕ ನದಿಗಳನ್ನು ನಿರ್ಮಿಸಿ ಬೇರೆಯವರಿಗೆ ಮಾರುತ್ತಾನೆ. ಅಲ್ಲಿ ವಿದ್ಯುತ್, ಒಳಚರಂಡಿ, ನೀರಿನ ವ್ಯವಸ್ಥೆ, ಉತ್ತಮ ರಸ್ತೆ, ಇವುಗಳನ್ನು ನೋಡಿ ಧರ್ಮೇಂದ್ರರು ಚಂದ್ರಕಾಂತರಿಗೆ ಪ್ರಶ್ನಿಸುತ್ತಾರೆ. "ನೀವಿರುವುದು ಮರುಭೂಮಿಯಾದರೂ ನೀರಿಗೆ ಬರವಿಲ್ಲ ; ಒಂದು ದಿನವೂ ದೀಪ ಆರಿ ಹೋದದ್ದಿಲ್ಲ ಬಿರುಕು ಕೊರಕಲುಗಳಿಲ್ಲದ ರಸ್ತೆಗಳನ್ನು ನೋಡಿದರೆ ಸಂತೋಷವಾಗುತ್ತದೆ. ನಗರದ ಜನಸಂಖ್ಯೆ ಕಡಿಮೆಯಾದ್ದರಿಂದ ನಿವಾಸಿಗಳು ನಗರಸಭೆಗೆ ಪಾವತಿ ಮಾಡಬೇಕಾದ ತೆರಿಗೆಯ ಪ್ರಮಾಣ ಹೆಚ್ಚಾಗಿರುತ್ತದಲ್ಲವೆ? 'ಆಸ್ತಿಪಾಸ್ತಿಗಳ ಬೆಲೆಯನ್ನು ಆಧಾರವಾಗಿಟ್ಟುಕೊಂಡು ತೆರಿಗೆ ಪ್ರಮಾಣವನ್ನು ನಿರ್ಧರಿಸುತ್ತಾರೆ. ಅದು ದುಬಾರಿಯೆನಿಸಿದರೂ ಗತ್ಯಂತರವಿಲ್ಲ. ನಾನೇ ವರ್ಷಕ್ಕೆ ಮೂರು ಸಾವಿರ ಡಾಲರ್ ಕೊಡುತ್ತೇನೆ"[7] ಎಂದು ಚಂದ್ರಕಾಂತ ಉತ್ತರಿಸುತ್ತಾರೆ. ಇಲ್ಲಿ ಅಮೆರಿಕಾದ ನಗರ ಸಭೆಗಳು ಜನರಿಗೆ ಮೂಲಭೂತ ಸೌಕರ್ಯಗಳನ್ನು ಸರಿಯಾಗಿ ಒದಗಿಸುತ್ತಾರೆ. ಎಲ್ಲ ಒಡೆತನ ಖಾಸಗಿಯವರು ವಹಿಸಿಕೊಂಡಿರುವುದು ಮತ್ತು ತೆರಿಗೆಯ ಸಂಪತ್ತಿನ ಸದ್ಬಳಕೆಯನ್ನು ಕರಾರುವಕ್ಕಾಗಿ ಮಾಡುವುದು ಕಂಡುಬರುತ್ತದೆ. ಜನತೆಯಿಂದ ಪಡೆದ ತೆರಿಗೆಯನ್ನು ಅವರ ಸೌಕರ್ಯಕ್ಕಾಗಿ ಬಳಸುತ್ತಾರೆ. ಇದು ಅವರ ಸಂಪತ್ತಿನ ಬಳಕೆಯ ವಿಧಾನವಾಗಿದೆ. ಜೀವಂತ ಮರುಭೂಮಿಯ ಮೀಸಲುದಾಣ (Living

Desen-Reserve)ವಿದೆ. ಮರುಭೂಮಿಯಲ್ಲಿ ಹುಟ್ಟಿ ಬೆಳೆಯುವ ಸಸ್ಯವರ್ಗ, ಪ್ರಾಣಿವರ್ಗಗಳನ್ನು ಕಾಣಬಹುದು. ಅಮೆರಿಕಾದ ಜನತೆ ಪ್ರತಿಯೊಂದು ಊರಿನಲ್ಲಿರುವ ನಿಸರ್ಗ ಸಂಪತ್ತು ಬಳಸಿಕೊಂಡು, ಸ್ಥಳೀಯ ಜನರಿಗೆ ಮನರಂಜನೆಯನ್ನು ಹಾಗೂ ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿ ಜನರನ್ನು ಆಕರ್ಷಿಸಿ ಅದರ ಮೂಲಕ ಸಂಪತ್ತನ್ನು ಕ್ರೋಢಿಕರಿಸುತ್ತಾರೆ. "ಜಗತ್ತಿನಲ್ಲೆಲ್ಲಿಯೂ ಇಲ್ಲದ್ದು ತಮ್ಮಲ್ಲಿದೆ ; ತಮ್ಮಲಿಲ್ಲದ್ದು ಬೇರೆ ಕಡೆಯಿಲ್ಲ ಎಂದು ಹೇಳಿಕೊಳ್ಳುವ ಹೆಮ್ಮೆ ಇವರದು"[೨] ಎಂದು ಇಂದುಮತಿಯವರು ಹೇಳುತ್ತಾರೆ. ಅಮೆರಿಕಾದ ಜನತೆ ಸದಾ ಉತ್ಸಾಹಶಾಲಿಗಳು, ಶ್ರಮವಹಿಸಿ ಕೆಲಸವನ್ನು ಮಾಡುತ್ತಾರೆ.

"ನಿಸರ್ಗ ಸೇತು ಮಹಾಕುಹರ (Natural bridge cavern) ನಲ್ಲಿ ಇದು ಭೂಮ್ಯಂತರ್ಗತವಾದ ಸುಣ್ಣಕಲ್ಲು ರಾಶಿಯ ನಡುವೆ ಗುಪ್ತ ನದಿಯೊಂದು ಹರಿದು, ರಚಿಸಿದ ಕುಹರ ಮತ್ತು ಸೇತುವೆಗಳಿಗೆ ಆ ಹೆಸರು ಬಂದಿದೆ"[೩] ಕುಹರದೊಳಗಿನ ಸೌಂದರ್ಯರಾಶಿಗೆ ಮನಸೋಲದವರಿಲ್ಲ. ಗವಿಗತ್ತಲೆಯಲ್ಲಿ ರೆಡ್ ಇಂಡಿಯನ್ನರು ವಾಸಿಸುತ್ತಿದ್ದ ಜಾಗ. ಇಲ್ಲಿನ ಕುಹರಗಳು ನಿಸರ್ಗದ ರಮ್ಯತೆಯನ್ನು ತೋರಿಸುತ್ತದೆ. ಮತ್ತು ಬುಡಕಟ್ಟುಗಳ ಇತಿಹಾಸವನ್ನು ಹೇಳುತ್ತದೆ ಎಂದು ವಿವರಿಸುತ್ತಾರೆ. ನಿಸರ್ಗ ವೈಶಿಷ್ಟ್ಯವನ್ನು ಮೂಲ ರೂಪಿನಲ್ಲಿ ಬಿಟ್ಟು ಅದನ್ನು ಸಂರಕ್ಷಿಸುವುದು ಅವರ ನಿಸರ್ಗ ಪ್ರೇಮದ ಪ್ರತೀಕವಾಗಿರುವುದನ್ನು ತಿಳಿಸುತ್ತಾರೆ. ಮತ್ತು ಪೆಲಿಕನ್ ದ್ವೀಪದಲ್ಲಿ ನಡೆಸಿದ ದೋಣಿವಿಹಾರ, ಆಕಾಶದಲ್ಲಿ ಹಾರಾಡುವ ಅನೇಕ ಹಕ್ಕಿಗಳನ್ನು ನೋಡಿ ಮೈಮರೆಯುತ್ತಾರೆ. ಅಮೆರಿಕನ್ನರು ನಿಸರ್ಗ ಹೊಳೆ, ದ್ವೀಪಗಳನ್ನು ಸುಂದರ ಪ್ರೇಕ್ಷಣೀಯ ಸ್ಥಳಗಳಾಗಿ ಮಾರ್ಪಡಿಸಿರುವುದನ್ನು ಮತ್ತು ಸ್ವಚ್ಛತೆಯ ಪರಿಯನ್ನು ತಿಳಿಸುತ್ತಾರೆ. ಅವರ ಕಲಾವಂತಿಕೆ ಅಭಿವ್ಯಕ್ತಿಗೊಳಿಸುವುದು ಅದರ ಮೂಲಕ ಹಣಸಂಪಾದನೆ ಮಾಡಿ ದೇಶದ ಆರ್ಥಿಕ ಪ್ರಗತಿ ಏಳಿಗೆ ಕಾರಣವಾಗುತ್ತದೆ. "ತಮ್ಮ ಊರುಗಳಲ್ಲಿ ಸಕಲ ಅನುಕೂಲಗಳನ್ನು ಒದಗಿಸಿ ಮನರಂಜನೆ ಸಾಧನೆಗಳನ್ನು ಅಳವಡಿಸಿ. ಪ್ರಾಕೃತಿಕ ವೈಶಿಷ್ಟ್ಯಗಳಿದ್ದರೆ ಅವನ್ನು ರೂಢಿಸಿ ಪ್ರೇಕ್ಷಣೀಯ ದೃಶ್ಯಗಳನ್ನಾಗಿ ಪರಿವರ್ತಿಸಬೇಕೆನ್ನುವ ಛಲಾಕಾಂಕ್ಷೆ ಇಲ್ಲಿಯ ಜನರಲ್ಲಿ ರಕ್ತಗತವಾಗಿದೆ"[೪] ಮರುಭೂಮಿಯನ್ನು ಹಸಿರಾಗಿಸಿ ಅಲ್ಲಿ ಕೃತಕ ಸರೋವರಗಳನ್ನು ನಿರ್ಮಿಸಿ ಮನರಂಜನೆ ಕೇಂದ್ರವಾಗಿಸಿ ನಿಸರ್ಗದ ಸಿರಿಯನ್ನು ಮತ್ತಷ್ಟು ಸುಂದರಗೊಳಿಸುವುದು ಅಲ್ಲಿನ ಜನತೆಯ ಮನೋದೃಢತೆಯನ್ನು ಸಾರುತ್ತದೆ ಎಂಬುದು ಓದಿದಾಗ ತಿಳಿದುಬರುತ್ತದೆ.

---

[೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೫.
[೨] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೯.

ಟೆಕ್ಸಾಸ್ ರಾಜ್ಯದ ಪೂರ್ವ ತೀರದಲ್ಲಿನ ಗ್ಯಾಲ್ ವೆಸ್ಟನ್ ದ್ವೀಪವನ್ನು ಧರ್ಮೇಂದ್ರರು ನೋಡಿ ಮನ ಸೋಲುತ್ತಾರೆ. ಅಲ್ಲಿನ ಮಾರ್ಗದರ್ಶಿಯ ಸ್ಥಳವಿವರಣೆ ಕೇಳಿ ಬೆರಗಾಗುತ್ತಾರೆ. ಬೀದಿಗಳಲ್ಲಿ ಕಡಲಕೆರೆಗಳಲ್ಲಿ ಸಂದಿಗೊಂದಿಗಳಲ್ಲಿ ಕಸ ಬಿದ್ದಿದೆ. ಅಲ್ಲೆಲ್ಲೆ ಬೆಳೆದು ಹುಲ್ಲು ಕತ್ತರಿಸಿಲ್ಲ. ಬಿರುಗಾಳಿಯ ಬೆದರಿಕೆಗೆ ಬಂಗಲೆಗಳನ್ನು ಕಟ್ಟಿಲ್ಲ. ರಸ್ತೆಗಳು ಧೂಳು ತುಂಬಿದೆ. ಗುಂಡಿಕೊರಕಲು ಬಿದ್ದಿದೆ. ಆದರೆ ಮಾರ್ಗದರ್ಶಿಯ ಮಾತಿನ ಚಮತ್ಕಾರಕ್ಕೆ ಬೆರಗಾಗುತ್ತಾರೆ. ಸೊನ್ನೆಯಿಂದ ಸ್ವರ್ಗವನ್ನು ಸೃಷ್ಟಿಸಿರುವ ಅವನ ಮಾತು, ಅವನಿಗೆ ಸ್ಥಳದ ಮೇಲಿನ ಅಭಿಮಾನ ವ್ಯಕ್ತವಾಗುವುದನ್ನು ಇಲ್ಲಿ  ಗಮನಿಸಬಹುದು.

ಲಾಂಗ್ ಬೀಚ್‌ನಲ್ಲಿರುವ ಕ್ವೀನ್ ಮೇರಿಯೆಂಬ ಹೆಸರಾಂತ ಹಡಗು ಅದು ಸ್ಯಾಟ್ಲಂಡಿನಲ್ಲಿ ತಯಾರಿಸಿ ಈ ಹಡಗು ೧೯೩೬ರಲ್ಲಿ ಅಟ್ಲಾಂಟಿಕ್ ಸಾಗರದಲ್ಲಿ ಸಂಚರಿಸಿ ೧೯೬೭ ಅದು ಲಾಂಗ್ ಬೀಚ್‌ನಲ್ಲಿ ನಿಂತಿದೆ. ಇದರ ದರ್ಶನಕ್ಕಾಗಿ ಲಕ್ಷಾಂತರ ಜನರು ಬಂದು ನೋಡಿ ಹೋಗುತ್ತಾರೆ. ಇದನ್ನು ನೋಡಿದಾಗ ಅಂದಿನ ಜನರ ಸಾಹಸಮಯ ಜೀವನ, ಸಂಸ್ಕೃತಿಯ ಪರಿಚಯವಾಗುತ್ತದೆ. ಇದು ಅವರ ಅಭಿರುಚಿಗೆ ಸಾಕ್ಷಿಯಾಗಿದೆ.

"ಡಿಸ್ನೆಲ್ಯಾಂಡ್ ಬರಿಯ ಮ್ಯೂಸಿಯಮ್ಮಲ್ಲ, ಅಂಗಡಿ ಮುಂಗಟ್ಟುಗಳ ಸಂತೆಯಲ್ಲ ಚಿತ್ರಮಂದಿರಗಳ ಜಾತ್ರೆಯಲ್ಲ, ವೈಜ್ಞಾನಿಕ ಹಾಗೂ ತಾಂತ್ರಿಕ ವಿಶ್ವವಿದ್ಯಾಲಯವೂ ಅಲ್ಲ. ಅದೊಂದು ಸಂಕ್ಷಿಪ್ತ ಬ್ರಹ್ಮಾಂಡ, ಭೂತವರ್ತಮಾನ ಭವಿಷ್ಯತ್ ಜಗತ್ತುಗಳನ್ನೊಳಗೊಂಡ ವಿಸ್ಮಯಕಾರಿ ವಿಶ್ವ! ಅದೊಂದು ಸ್ವಪ್ನಲೋಕ, ಮಾನವನ ಕಲ್ಪನಾ ಪ್ರತಿಭೆಯ ಪ್ರತೀಕ!"[೫] ಎಂದು ಧರ್ಮೇಂದ್ರರು ಹೇಳುತ್ತಾರೆ. ಅಲ್ಲಿನ ಅದ್ಭುತ, ವಿಸ್ಮಯ, ರಮ್ಯ, ಸುಮನೋಹರವಾದ ಕಲ್ಪನಾವಿಲಾಸವನ್ನು ನೋಡಿಯೇ ಅನುಭವಿಸಬೇಕು. ಮಿಕ್ಕಿಮೌಸ್‌ನ ಮಾಯಾಲೋಕ, ಹಾಲಿವುಡ್ ಭ್ರಮಾತ್ಮಕ ಜಗತ್ತನ್ನು ಲೇಖಕರು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಾರೆ. ಅಲ್ಲಿನ ಜನರ ಶ್ರಮದ ದುಡಿಮೆ "ಮನಸ್ಸಿರುವ ಮನುಷ್ಯನಿಗೆ ಮಾಡುವ ಕೆಲಸ ಅಪಾರವಾಗಿದೆ . . . ಈಗಾಗಲೇ ಪ್ರಪಂಚದಲ್ಲಿ ತುಂಬಿ ತುಳುಕುತ್ತಿರುವ ಅಸಹ್ಯತೆ ಹಾಗೂ ಸಿನಿಕತನಗಳನ್ನು ನಾನು

[೩] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ. ಪು. ೪೮.
[೪] ದೇ.ಜ.ಗೌ ವಿಸ್ಮಯಗಳ ನಾಡಿನಲ್ಲಿ, ಪು. ೨೫.
[೫] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೧೭.

ಅಧಿಕಗೊಳಿಸಲಾರೆ"[೬] ಎಂದು ವಾಲ್ಟರ್ ಎಲಿಯಾಸ್ ಡಿಸ್ನೆ ಮಾತನ್ನು ಸಾಕಾರಗೊಳಿಸಿ ತೋರಿಸಿರುವುದನ್ನು ಕಾಣಬಹುದಾಗಿದೆ.

ಅಮೆರಿಕಾದ ಅನೇಕ ನಗರಗಳು ಮರುಭೂಮಿಯ ಪ್ರದೇಶಗಳಲ್ಲಿ ಬೆಳವಣಿಗೆಯಾಗಿವೆ. ಆದರೆ ಅಲ್ಲಿ ಮರುಭೂಮಿಯ ಕುರುಹು ಉಳಿಯದಂತೆ ಅಲ್ಲಿನ ಪ್ರಕೃತಿಯನ್ನು ಪುನರ್ ಸೃಷ್ಟಿಸಿದ್ದಾರೆ ಅಮೆರಿಕನ್ನರು. ಅಲ್ಲಿಯ ವೈಭವ ಅದು ದಿನದಿನಕ್ಕೆ ಬೆಳೆಯುತ್ತಿರುವುದು, ಎಲ್ಲರೂ ಒಂದೇ ಮನಸ್ಸಿನಿಂದ ದುಡಿಯುವುದು, ಬೇಸಿಗೆಯಲ್ಲಿಯೂ ಮರಗಿಡಗಳು ನಳನಳಿಸುತ್ತವೆ. ಪ್ರತಿಯೊಂದು ಮನೆಯ ಮುಂದೆ ಸಣ್ಣ ಉದ್ಯಾನವನಗಳು ಮನಸೆಳೆಯುತ್ತವೆ. ಪ್ರಕೃತಿಯನ್ನು ಪುನರ್‌ಸೃಷ್ಟಿಸಿ ಅದರ ಮೂಲಕ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುವ ಅಮೆರಿಕನ್ನರ ಮನಸ್ಥಿತಿಯನ್ನು ತಿಳಿಯಲು ಮರುಭೂಮಿ ನಗರಗಳೇ ಸಾಕ್ಷಿಯಾಗಿವೆ. ನಿಸರ್ಗವನ್ನು ತನಗೆ ಬೇಕಾದ ಹಾಗೆ ಪರಿವರ್ತಿಸಿ ಅದರ ಮೂಲಕ ಸಂಪತ್ತು ಹೆಚ್ಚಿಸುವುದನ್ನು ಅವರ ವ್ಯವಹಾರಿಕ ಮನೋಭಾವದಲ್ಲಿ ವ್ಯಕ್ತವಾಗುತ್ತದೆ.

ಲಾಸ್‌ವೇಗಸ್‌ನ ಇತಿಹಾಸವನ್ನು ಕೃತಿಯಲ್ಲಿ ವಿವರಿಸುತ್ತಾರೆ. ಮರುಭೂಮಿಯಾಗಿದ್ದ ಭೂಪ್ರದೇಶದಲ್ಲಿ ಮಾರ್ಮನ್ ಕ್ರಿಶ್ಚಿಯನ್ ಜನರು ಬಂದು ನೆಲಸಿ ಹಣ್ಣು ತರಕಾರಿಗಳ ಬೇಸಾಯ ಆರಂಭಿಸುತ್ತಾರೆ. ಕೆಲವರು ಗಣಿ ಕೆಲಸ ಮಾಡುತ್ತಾರೆ. ನಂತರದ ವರ್ಷಗಳಲ್ಲಿ ಬಿಳಿಯರು ಬಂದು ನೆಲಸಿ ಕೃಷಿ ಆರಂಭಿಸುತ್ತಾರೆ. ನಂತರ ಇಲ್ಲಿ ದ್ಯೂತಗೃಹ, ಸೆಲೂನು ಮತ್ತು ವ್ಯಾಪಾರದ ಮಳಿಗೆಗಳು ಊರಿನ ಬೆಳವಣಿಗೆಗೆ ಕಾರಣವಾಗುತ್ತದೆ. ೧೯೩೧ರಲ್ಲಿ ಹೂವರ್ ಅಣೆಕಟ್ಟು ನಿರ್ಮಾಣಕ್ಕೆ ತೊಡಗಿದಾಗ ವ್ಯಾಪಾರ ಅಭಿವೃದ್ಧಿಯಾಗಿ ವಾಣಿಜ್ಯವಾಗಿ ನಗರ ಬೆಳೆಯುತ್ತದೆ. ಸರ್ಕಾರ ದ್ಯೂತಕ್ಕೆ ಪರವಾನಗಿ ನೀಡುತ್ತದೆ. ಇದರಿಂದ ಆರ್ಥಿಕವಾಗಿ ನಗರ ಬೆಳವಣಿಗೆ ಹೊಂದುತ್ತದೆ. ಹೀಗೆ ಮರುಭೂಮಿ ಪ್ರದೇಶವನ್ನು ಶ್ರೀಮಂತವಾಗಿಸಿದ ಜನರ ದುಡಿಮೆ. ಅವರ ಆಸಕ್ತಿ ಶ್ರಮ ಕಂಡುಬರುವುದು ತಿಳಿದುಬರುತ್ತದೆ ಹೀಗೆ ಮನರಂಜನೆ ಒದಗಿಸಿ ನಗರ ಆರ್ಥಿಕವಾಗಿ ದೃಢವಾಗಿರುವುದು ಮತ್ತು ಇದರ ಮೂಲಕ ಸಂಪತ್ತಿನ ಸದ್ಬಳಕೆಯಾಗಿರುವುದು ಕಾಣುತ್ತದೆ.

ಅರಿಜೋನಾದ ಮಹಾಕಂದರ ೨೫೦ ಮೈಲಿ ಉದ್ದವಿದೆ. ಕೊಲರೇಡೊ ನದಿಯ ಕೊರತದಿಂದಾಗಿ ಕಂದರ ರೂಪವಾಗಿದೆ. ನಿಸರ್ಗ ಸಹಜವಾದ ಕೊರತದಿಂದ ಉದ್ಭವಿಸಿದ

---

[೬] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೩೪.

ಮಹಾಕಂದರವು ಪ್ರವಾಸಿ ಸ್ಥಳವಾಗಿದೆ. ಇದನ್ನು ಪ್ರವಾಸಿಗರಿಗೆ ಮನತಣಿಸುವಂತೆ ವ್ಯವಸ್ಥೆಗೊಳಿಸಿ ಪ್ರವಾಸೋದ್ಯಮವನ್ನು ಬೆಳೆಸಿ ಆರ್ಥಿಕವಾಗಿ ಬೆಳೆಯಲು ಪೂರಕ ಸಾಮಗ್ರಿಗಳನ್ನು ಒದಗಿಸಿದ್ದಾರೆ ಅಮೆರಿಕನ್ನರು.

ಅರಿಜೋನ್ ಪ್ರಾಂತ್ಯದ ಕಾಯಬಾಬ (Kaibab) ರಾಷ್ಟ್ರೀಯ ವನದಲ್ಲಿ ಸುತ್ತಾಡುವಾಗ ಬ್ರೈಟ್ ಎಂಜಲ್ ಬಿಂದುವಿನಲ್ಲಿ ನಿಂತರೆ ಕಾಣುವ ಬುದ್ಧದೇವಾಲಯ, ಕಾಲಕೆಳಗಿನ ಪ್ರಪಾತ, ಭವ್ಯಕಾರಕ ಶಿಲ್ಪಗಳನ್ನು ಕಂಡು ಪುಲಕಗೊಳ್ಳುತ್ತಾರೆ. ಅಲ್ಲಿಯ ಪಕ್ಕದಲ್ಲಿ ಬಲಗಡೆಗಿರುವ ದೇವ ದೇವಾಲಯ, ಬ್ರಹ್ಮ, ವಿಷ್ಣು ದೇವಾಲಯಗಳು ಮತ್ತು ಪಕ್ಕದಲ್ಲಿ ಜೊರಾಸ್ಟರ್ ದೇವಾಲಯಗಳು ಕಾಣುತ್ತವೆ. "ಇಡೀ ಕಂದರದ ಎರಡೂ ದಡಗಳಲ್ಲಿ ಒಂದರ ಬಳಿ ಮತ್ತೊಂದರಂತೆ, ಸಾಲು ಸಾಲಾಗಿ, ಹಿಂದು ಮುಂದಾಗಿ ನೂರಾರು ದೇವಸ್ಥಾನಗಳನ್ನು ನಿರ್ಮಿಸಿರುವಂತೆ, ಅದೊಂದು ದೇವಾಲಯಗಳ ಪಟ್ಟ ಜಗತ್ತೆನ್ನುವಂತೆ, ಇಡೀ ಜಗತ್ತೇ ದೇವಾಲಯಗಳಿಂದ ಇಡಿಕಿರಿದಂತೆ, ಜಗತ್ತಿನ ಎಲ್ಲ ದೇವರುಗಳು ಅಲ್ಲಿ ನೆರೆದು ತಮತಮಗೆ ಒಂದೊಂದು ದೇವಾಲಯವನ್ನು ಕಟ್ಟಿಕೊಂಡಂತೆ ಭಾಸವಾಗಿ, ಮನಸ್ಸು ದಿವ್ಯ ಸುಖದಲ್ಲಿ ಮೀಯುತ್ತದೆ."[೭] ಎಂದು ಅಲ್ಲಿನ ದೇವಾಲಯಗಳ ಭವ್ಯತೆ, ಸೃಷ್ಟಿಯ ಶಿಲೆಯ ರಮ್ಯತೆಗೆ ಮಾರು ಹೋಗುತ್ತಾರೆ. ಅಲ್ಲಿನ ಶಿಲ್ಪರಚನೆಗಳನ್ನು ನೋಡಿ ಭಾವೋನ್ಮಾದವನ್ನು ಧರ್ಮೇಂದ್ರರು ಅನುಭವಿಸಿ ಅವರು ಆ ಭಾವವನ್ನು ಸಂಯಮಿಸಿಕೊಳ್ಳುತ್ತಾರೆ. ಸೌಂದರ್ಯದ ಮೂರ್ತಿಯಂತೆ ಕಂಗೊಳಿಸುವ ಗೋಡೆಗಳನ್ನು ನೋಡಿ ಮೋಹಗೊಳ್ಳುತ್ತಾರೆ. ನಿಸರ್ಗದ ಸೊಬಗಿಗೆ ಭಾವಪರವಶರಾಗುತ್ತಾರೆ. ಆ ಗೋಡೆಗಳ ನಡುವೆ ರಸಾತಲದಲ್ಲಿ ನಡೆಯುತ್ತಿರುವ ಅಗೋಚರ ನಿರ್ಝರಿಣಿಯ ಅದ್ಭುತ ಕ್ರಿಯೆಯ ರಹಸ್ಯವನ್ನು ನೋಡಿ ವಿಸ್ಮಯಗೊಳ್ಳುತ್ತಾರೆ. "ಅಲ್ಲಿಯ ಪ್ರತಿಯೊಂದು ಶಿಲೆಯೂ ಕೋಟಿ, ಕೋಟಿ ವರ್ಷಗಳ ಇತಿಹಾಸವನ್ನುಸುರುವ, ಸೃಷ್ಟಿಯ ಗುಟ್ಟನ್ನು ಬಯಲು ಮಾಡುವ ಚೈತನ್ಯ ವಸ್ತುಗಳಾಗಿವೆ. "ಶಿಲೆಯಲ್ಲಿ ಕಲೆಯ ಬಲೆಯನ್ನು ನೆಯ್ದಿರುವ ಉಪಕರಣಗಳು ತಾಮ್ರವಲ್ಲ, ಉಕ್ಕಲ್ಲ, ಕಾಲದ ಗಣನೆಗೆ ಶರಣಾಗದೆ ವಿರಾಮವಾಗಿ ಶಿಲ್ಪಿಸಿದ ಗಾಳಿ ನೀರುಗಳ ಮೃದು ಸ್ಪರ್ಶ"ವೆಂಬ ಥೋರೋನ ನುಡಿಮುತ್ತುಗಳನ್ನು ಧರ್ಮೇಂದ್ರರು ನೆನಪಿಸಿಕೊಳ್ಳುತ್ತಾರೆ. ಕುವೆಂಪು ಅವರ ಮಾತಿನಲ್ಲಿ ಹೇಳಬಹುದಾದರೆ 'ಭಗವಂತನಾನಂದ ರೂಪುಗೊಂಡಿಹುದಿಲ್ಲಿ ; ಇಲ್ಲಿ ಕಾಲಕ್ಕೂ ಹೆಳವು ಪ್ರಾಪ್ತವಾಗಿದೆ"[೮] ಎಂಬ ಮಾತನ್ನು ಮೆಲಕು ಹಾಕುತ್ತಾರೆ. ಭಗವಂತನ

---

[೭] ದೇ.ಜ.ಗೌ, ವಿಸ್ಮಯಗಳ ನಾಡಿನಲ್ಲಿ – ಪು. ೧೭೯.

[೮] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ – ಪು. ೧೮೦

ನಿಸರ್ಗ ಸೃಷ್ಟಿಯ ಭವ್ಯ ಮಹತ್ತಿಗೆ ಬೆರಗುಗೊಳ್ಳುತ್ತಾರೆ. ಅಮೆರಿಕಾದ ಸೃಷ್ಟಿಯ ಸೊಬಗಿನ ವಿಸ್ಮಯವನ್ನು ಎಳೆ ಎಳೆಯಾಗಿ ಓದುಗರಿಗೆ ತಿಳಿಸಿಕೊಡುತ್ತಾರೆ.

ನಿಸರ್ಗದ ಕಲಾವಂತಿಕೆ ಮುಂದೆ ಮಾನವನ ಕಲಾವಂತಿಕೆ ಕಳಾಹೀನ "ಪ್ರಕೃತಿ ದುರ್ಗಿಯಾದರೆ ಊರೂರೇ ಕೊಚ್ಚಿ ಹೋಗುತ್ತವೆ; ನಾಡಿಗೆ ನಾಡೇ ಮುಳುಗಿ ಹೋಗುತ್ತದೆ. ಆಕೆ ಶಂಕರಿಯಾದರೆ ಮಹಾಕಂದರದ ಭವ್ಯಶಿಲ್ಪಿ ಮೂಡುತ್ತದೆ. ಬಂಜೆ ನೆಲದಲ್ಲಿ ಹಸಿರು ಉಕ್ಕುತ್ತದೆ. ಮಹಾಕಂದರದ ನಿರ್ಮಾಣ ನೂರು ವರ್ಷದಲ್ಲಿ ಮುಗಿದದ್ದಲ್ಲ; ಮಿಲಿಯಾಂತರ ವರ್ಷಗಳಲ್ಲಿ ನಡೆದದ್ದು; ಇಂದಿಗೂ ನಡೆಯುತ್ತಿದೆ. ಕೊಲರೇಡೂ ಕಲಾಶಂಕರಿಯಾಗಿ ಲೋಕಲಕ್ಷ್ಮಿಯಾಗಿ ತನ್ನ ಹೊರಗೆ ಬಂದವರ ಮೈಮನಗಳೆರಡಕ್ಕೂ ಆನಂದ ಕರುಣಿಸುತ್ತಾಳೆ. ಆ ಕಂದರದ ಸನ್ನಿಧಿಯಲ್ಲಿ ನಿಂತಾಗ ಮಾನವ ಅತೀತದೆಡೆಗೆ ಸಾರಿ ಅನಂತವನ್ನು ಸಂಸ್ಪರ್ಶಿಸಿದಂತಾಗುತ್ತದೆ."[೯] ಹೀಗೆ ಪ್ರಕೃತಿಯ ಸೊಬಗನ್ನು ವರ್ಣಿಸುತ್ತಾರೆ. ಆದರೆ ಮಾನವ ಬೆಳೆದಂತೆಲ್ಲಾ ಪ್ರಕೃತಿಯನ್ನು ನಾಶಮಾಡುವ ಕೆಲಸಕ್ಕೆ ಕೈ ಹಾಕುತ್ತಾನೆ. ಆ ಸೃಷ್ಟಿಯ ಕಲೆಯ ಸೊಬಗನ್ನು ಕುರೂಪಗೊಳಿಸಿ ಅದರಿಂದ ಹಾನಿಯನ್ನು ತಾನೇ ಕೈಯಾರೆ ತಂದುಕೊಳ್ಳುತ್ತಿದ್ದಾನೆ. ಹಿಂದುಮುಂದು ಯೋಚಿಸಿದ ಇಂಥ ಸೃಷ್ಟಿಯ ಶಿಲೆಯ ಅಕ್ಕಪಕ್ಕದ ಅರಣ್ಯಗಳನ್ನು ನಾಶಗೊಳಿಸಿ, ಅವನ ಅವಸಾನವನ್ನು ಅವನೇ ತಂದುಕೊಳ್ಳುತ್ತಿದ್ದಾನೆ. ಪ್ರಕೃತಿಯ ಜೊತೆಯಲ್ಲಿ ಸಾಮರಸ್ಯದಿಂದ ಬದುಕುವುದನ್ನು ಬಿಟ್ಟು ಪ್ರಕೃತಿಗೆ ವಿರುದ್ಧವಾಗಿ ಸೆಣಸಾಡಲು ಮಾನವ ತೊಡಗಿದ್ದಾನೆ. ಇದರಿಂದ ಅವನಿಗೆ ಅಲ್ಪ ಉನ್ನತಿಯ ಜೊತೆಯಲ್ಲಿ ಅವನತಿಯನ್ನು ಕಾಣುತ್ತಾನೆ. ನಮ್ಮ ದೇಶದಲ್ಲೂ ಕೂಡ ಮಾನವನ ಅಲ್ಪಮತಿಗೆ ಸಿಕ್ಕ ಅನೇಕ ಪ್ರಕೃತಿಯ ಸೊಬಗು ಇಂದು ಕುರೂಪಗೊಂಡು ಹಾಳಾಗುತ್ತಿವೆ ಎಂಬುದು ಕೃತಿಯನ್ನು ಓದುವಾಗ ಅನಿಸುತ್ತದೆ. ಮನುಷ್ಯನ ಸ್ವಾರ್ಥತೆ ಇದಕ್ಕೆಲ್ಲಾ ಕಾರಣವಾಗಿದೆ.

ಕೊಲರೇಡೊ ನದಿಗೆ ಅಣೆಕಟ್ಟು ಕಟ್ಟಿ ಜಲಸಂಗ್ರಹ ಮಾಡಿ ವಿದ್ಯುಚ್ಛಕ್ತಿಯ ಉತ್ಪಾದನೆ ಮಾಡಿ ದೇಶ ಕಲ್ಯಾಣದ ಕಡೆಗೆ ಅನುಕೂಲವಾಗಲು ಕಾರಣವಾಗುತ್ತದೆ. ಇದರಿಂದ ದೇಶದ ವಿವಿಧೋದ್ದೇಶಗಳನ್ನು ಪೂರೈಸಿಕೊಂಡಿದ್ದಾರೆ. ಯಾವುದೇ ಸ್ವಾರ್ಥವಿಲ್ಲದೆ, ನಿಸ್ವಾರ್ಥ ಸೇವೆಯನ್ನು ಸರ್ಕಾರ ಮಾಡಿದಾಗ ಅಲ್ಲಿನ ಅಧಿಕಾರಿಗಳ ಪರಿಶ್ರಮ, ಜನತೆಯ ಪ್ರೋತ್ಸಾಹಗಳು ದೇಶ ಕಲ್ಯಾಣ ರಾಜ್ಯವಾಗಲು ಕಾರಣವಾಗಿದೆ.

---

[೯] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೮೧.

ಚಾಟನೂಗದ ದರ್ಶನ ಪರ್ವತ (Look out Mountain) ಅಲ್ಲಿ ಮುಖ್ಯವಾದ ಜಲಪಾತ, ರೂಬಿ ಜಲಪಾತ, "ಇಡೀ ಜಗತ್ತಿನಲ್ಲಿ ರಕ್ತವನ್ನು ಹೆಪ್ಪುಗಟ್ಟಿಸುವ, ಮನಸ್ಸನ್ನು ಭ್ರಮೆಗೊಳಿಸುವ ಕಲ್ಪನೆಯನ್ನು ಬೆರಗುಗೊಳಿಸುವ ಭವ್ಯಸುಂದರ ಜಲಪಾತ ಮತ್ತೊಂದಿಲ್ಲವೆಂದರೆ ಬಲ್ಲವರು ಪರಿಹಾಸ ಮಾಡುವ ಸಂಭವವುಂಟು."[೧೦] ಅಲ್ಲಿನ ಬಿಲದ ಭಯಂಕರ ಅಲ್ಲಿ ಹರಿಯುವ ನದಿಯ ಮಂಜುಳಧ್ವನಿ, ಅಲ್ಲಿನ ನಾನಾ ತರದ ಬಣ್ಣ ಬಣ್ಣದ ಆಕೃತಿಗಳು ಅವುಗಳನ್ನು ನೋಡಲು ದೀಪದ ವ್ಯವಸ್ಥೆಯನ್ನು ನೋಡಿ, ದೀಪದ ಬೆಳಕಿನಲ್ಲಿ ಆಕೃತಿಗಳು ಮೋಹನ ಶಿಲ್ಪಿಗಳಾಗಿ ಕಂಗೊಳಿಸಿ ಪ್ರೇಕ್ಷಕನ ಮನವನ್ನು ತಣಿಸುತ್ತದೆ ಮತ್ತು ಶಿಲಾನಗರೋದ್ಯಾನ (Rock city gardens) ಇದೊಂದು ಶಿಲೆಗಳ ನಗರ ಸಾಲು ಸಾಲು ಶಿಲೆಗಳು ಅನೇಕ ಆಕೃತಿಗಳನ್ನು ರಚಿಸಿವೆ. ಇದರ ಆಕರ್ಷಣೆ ಹೆಚ್ಚಿಸಲು ಒಂದು ಕಡೆ ಜಿಂಕೆಗಳ ರೂಪ್ಪ, ಮತ್ತು ನಾನೂರು ಜಾತಿಯ ಗಿಡಮರಗಳನ್ನು ಬೆಳೆಸಿ ಪ್ರವಾಸಿಗರನ್ನು ಆಕರ್ಷಿಸಲು ಅವರು ಕೈಗೊಂಡಿರುವ ಕ್ರಮಗಳನ್ನು ಕಾಣಬಹುದಾಗಿದೆ. ಚಿಕಮೌಗ ಅಣೆಕಟ್ಟುಗಳು ಇಲ್ಲಿ ನಿರ್ಮಿಸಿರುವ ಪ್ರತಿಯೊಂದು ಅಣೆಕಟ್ಟುಗಳಲ್ಲಿ ವಿದ್ಯುದಾಗಾರಗಳ ನಿರ್ಮಾಣ, ಮತ್ತು ವ್ಯಾಪಾರವಾಣೀಜ್ಯಾದಿಗಳ ಅಭಿವೃದ್ಧಿಯ ಜೊತೆಗೆ ಜನತೆಯ ವಿಹಾರ ಯೋಗ್ಯವಾದ ಉದ್ಯಾನವನಗಳನ್ನು ನಿರ್ಮಿಸಿ ಆಕರ್ಷಣೀಯವಾಗಿಸಿ ಪ್ರವಾಸಿಗರನ್ನು ಸೆಳೆದು ಆರ್ಥಿಕತೆಯನ್ನು ಹೆಚ್ಚಿಸಿಕೊಂಡಿದೆ.

ಅಟ್ಲಾಂಟದಿಂದ ಪೂರ್ವಕ್ಕಿರುವ ಉತ್ತರ ಅಮೆರಿಕ ಅತ್ಯಂತ ದೊಡ್ಡದಾದ ಬೆಟ್ಟ ಸೃಷ್ಟಿ ವಿಸ್ಮಯತೆಗೆ ಮತ್ತೊಂದು ದ್ಯೋತಕವಾಗಿದೆ. ೨ ಮೈಲಿ ಉದ್ದ, ೧ ಮೈಲಿ ಅಗಲದ ಬೆಟ್ಟ ೩,೨೦೦ ಎಕರೆ ವಿಸ್ತೀರ್ಣದ ಉದ್ಯಾನವನ ಅಮೆರಿಕಾದ ಹಿಂದಿನ ಅಧ್ಯಕ್ಷರ ಶಿಲಾಪ್ರತಿಮೆಗಳು ಮನಸೆಳೆಯುತ್ತವೆ. ಪ್ರವಾಸಿ ಕೇಂದ್ರದಲ್ಲಿ ಸೌಲಭ್ಯಗಳನ್ನು ಒದಗಿಸಿ ಸೃಷ್ಟಿ ಸೊಬಗನ್ನು ಸವಿಯಲು ಯಾತ್ರಿಕರಿಗೆ ಉತ್ತಮ ಸೌಲಭ್ಯಗಳನ್ನು ಒದಗಿಸಿದ್ದಾರೆ. "ಅಮೆರಿಕ ಮ್ಯೂಸಿಯಮ್‌ಗಳ ಉದ್ಯಾನಗಳ ಉಗ್ರಾಣ ಜಗತ್ತಿನಲ್ಲೆಲ್ಲಿಯೂ ಇಲ್ಲಿರುವಷ್ಟು ಕಮಾನು ಕಾಪಿನ ಉದ್ಯಾನಗಳಿಲ್ಲ."[೧೧] ಎಂದು ಲೇಖಕರು ಹೇಳುತ್ತಾರೆ. ಇಲ್ಲಿ ಮನರಂಜನೆಗಾಗಿಯೇ ಅನೇಕ ಉದ್ಯಾನಗಳು ನಿರ್ಮಿತವಾಗಿವೆ ಅವುಗಳಲ್ಲಿ 'ಯೆಲ್ಲೋಸ್ಟೋನ್ ರಾಷ್ಟ್ರೀಯ ಉದ್ಯಾನ" ಐವತ್ತು ಸಾವಿರ ಚದರ ಮೈಲಿ ವಿಸ್ತೀರ್ಣದ ಉದ್ಯಾನ. ಬಿಸಿ ನೀರಿನ ಊಟೆಗಳು, ಜಲಪಾತಗಳು, ಸರೋವರಗಳು ಕರಡಿ ಜಿಂಕೆ ಮೊದಲಾದ ಪ್ರಾಣಿಗಳನ್ನು ಇಲ್ಲಿ ಕಾಣಬಹುದು. ಅಮೆರಿಕದ ಜನರು ಇಲ್ಲಿಯ

---

[೧೦] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೯೩.
[೧೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೩೩.

ಪ್ರಕೃತಿಯನ್ನು ಬುದ್ಧಿವಂತಿಕೆಯಿಂದ ಪ್ರಾಮಾಣಿಕ ಪ್ರಯತ್ನಗಳಿಂದ ಸುಂದರವಾಗಿ ರೂಢಿಸಿಕೊಂಡಿದ್ದಾರೆ.

ಹವಾಯಿದೀಪಗಳು, ಪರ್ಲಹಾರ್ಬರ್ ಪ್ರದೇಶ. ರಾಷ್ಟ್ರೀಯ ಸ್ಮಾರಕ ಪಂಚ್‌ಬೌಲ್, ವಯಾಮಿಯಾ ಕೊಲ್ಲಿ, ಹೀಗೆ ಅನೇಕ ಸ್ಥಳಗಳು ಅಮೆರಿಕಾದಲ್ಲಿ ಪ್ರವಾಸಿ ಕೇಂದ್ರಗಳಾಗಿವೆ. ಪ್ರಕೃತಿ ಸೊಬಗನ್ನು ಅವರು ಸಂಪತ್ತುಗಳಾಗಿ ಪರಿವರ್ತಿಸಿ ಅವುಗಳ ಮೂಲಕ ದೇಶದ ಆರ್ಥಿಕ ಸ್ಥಿತಿಯನ್ನು ಬಲಪಡಿಸಿಕೊಂಡಿದ್ದಾರೆ. "ಎಲ್ಲೆಂದರಲ್ಲಿ, ಜೀವವಿರುವ ಇಲ್ಲದಿರುವ ಯಾವ ವಸ್ತುವೇ ಆಗಲಿ, ಅವುಗಳಲ್ಲಿ ಏನಾದರೂ ವಿಶೇಷವನ್ನು ಗುರುತಿಸಿ, ಅದನ್ನು ಪ್ರೇಕ್ಷಣೀಯ ವಸ್ತುವಾಗಿ ಪರಿವರ್ತಿಸಿ, ಸಾಮಾನ್ಯವಾದದ್ದನ್ನು ಅಸಾಮಾನ್ಯಕ್ಕೆತ್ತಿ ಜಡದಲ್ಲಿ ಚೈತನ್ಯವನ್ನು ಚೈತನ್ಯದಲ್ಲಿ ಅದ್ಭುತವನ್ನು ತುಂಬಿ ಪ್ರವಾಸಿಗರನ್ನು ಆಕರ್ಷಿಸುವ ಕಲ್ಪನಾ ಸಾಮರ್ಥ್ಯ ನಿಸರ್ಗಪ್ರಿಯ ಅಮೆರಿಕೆಯ ಜನರಲ್ಲಿ ಅಪಾರ ಪ್ರಮಾಣದಲ್ಲಿದೆ.[೧೨] ಅಮೆರಿಕಾದ ಜನರು ಯಾವಾಗಲೂ ನಾವು ಇತರರಿಗಿಂತ ಭಿನ್ನ, ಮುಂದೆ ಎಂಬುದನ್ನು ತೋರಿಸಿಕೊಡುವ ಮನಸ್ಸುಳ್ಳವರು, ಅದನ್ನು ಅವರು ಸಾಧಿಸಿ ತೋರಿಸಿದ್ದಾರೆ. ನಮ್ಮ ದೇಶದ ಹಾಗೆ ಕೊಳಕು ರಾಜಕೀಯ ಯಾವ ಕೆಲಸ ಮಾಡುಬೇಕಾದರೆ ಉತ್ತಮ ಪ್ರತಿಕ್ರಿಯೆ ಇಲ್ಲದಿರುವುದು, ನಮ್ಮ ದೇಶದ ಅನೇಕ ನಿಸರ್ಗ ಸಂಪತ್ತು ಸರಿಯಾದ ಸಂರಕ್ಷಣೆಯಿಲ್ಲದೆ ಯಾರ ಕಣ್ಣಿಗೂ ಗೋಚರವಾಗದೆ ಉಳಿದಿವೆ. ಇನ್ನೂ ಅನೇಕ ಸೃಷಿಯ ರಮ್ಯತೆಯ ಸ್ಥಳಗಳಿಗೆ ಸರಿಯಾದ ಸೌಕರ್ಯಗಳಿಲ್ಲದೆ ಉಳಿದುಕೊಂಡಿವೆ. ಪರಿಸರದ ಸ್ವಚ್ಛತೆ ಅಲ್ಲಿ ತಂಗಲು ಬೇಕಾದ ವ್ಯವಸ್ಥೆ, ವಾಹನ ಸೌಕರ್ಯ ರಸ್ತೆಗಳ ಅಭಿವೃದ್ಧಿ ಮುಂತಾದ ವಿಷಯಗಳ ಬಗ್ಗೆ ಯಾರೂ ಗಮನ ಹರಿಸದೆ ರಾಷ್ಟ್ರೀಯ ಸಂಪತ್ತಿನ ಸದ್ಬಳಕೆ ಆಗದೆ ದೇಶ ಬಡತನದಲ್ಲಿ ಸೊರಗುತ್ತಿದೆ.

ಅಟ್ಲಾಂಟದ ಹೊರಸುತ್ತಿನಲ್ಲಿದ್ದ ಲೇನಿಯರ್ ಸರೋವರದ ಮೂಲಕ ಹೋಗುವಾಗ ಅಲ್ಲಿ ತೋಡುಯಂತ್ರಗಳಿಂದ ಹೂಳು ತೆಗೆಯುತ್ತಿದ್ದ ಕ್ರಮವನ್ನು ನೋಡುತ್ತಾರೆ. "ಅಲ್ಲಿಯ ಅನೇಕ ಕೆರೆಕಟ್ಟೆಗಳಲ್ಲಿ ಈ ಕೆಲಸ ನಿರಂತರವಾಗಿ ನಡೆಯುತ್ತವಂತೆ ಮಣ್ಣು ಸಮೆದು ಕೆರೆ ಕೊಳ ನದಿಗಳು ಹೂತು ಹೋಗದಂತೆ ದಡಗಳಲ್ಲಿ ಗಿಡಮರಗಳನ್ನು ಬೆಳೆಸುತ್ತಾರೆ. ಮಾನವ ನಿರ್ಮಿತ ಬನಸಿರಿ ಕಣ್ಮನಗಳಿಗೆ ಹಬ್ಬವಾಗುತ್ತದೆ. ಪರಿಸರ ನೈರ್ಮಲ್ಯದ ಬಗ್ಗೆ ಅಲ್ಲಿಯ ಆಡಳಿತ ಸದಾ ಹದ್ದುಗಣ್ಣಾಗಿ ಎಚ್ಚರವಹಿಸುತ್ತದೆ."[೧೩] ಅಲ್ಲಿಯ ಕೆರೆ, ಸರೋವರಗಳ ಹೂಳುಗಳನ್ನು ಕಾಲಕಾಲಕ್ಕೆ ತೆಗೆದು

---

[೧೨] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೧೦.
[೧೩] ದೇ.ಜ.ಗವ. ವಿಸ್ಮಯಗಳ ನಾಡಿನಲ್ಲಿ, ಪು. ೨೧೪.

ಶುದ್ಧೀಕರಿಸಿ ಅವುಗಳನ್ನು ಸ್ವಚ್ಛಗೊಳಿಸುವುದನ್ನು ಓದಿದಾಗ. ನಮ್ಮ ದೇಶದ ಕೆರೆಗಳು ನೆನಪಿಗೆ ಬರುತ್ತದೆ. ಎಷ್ಟೋ ದೊಡ್ಡ ಕೆರೆಗಳು ಇಂದು ಹೇಳಲು ಹೆಸರಿಲ್ಲದಂತಾಗಿವೆ. ಕೆರೆಯನ್ನು ನಾಶಗೊಳಿಸಿ ಇಲ್ಲಿನ ಜನ ಸೈಟುಗಳನ್ನು ಮಾಡಿಕೊಂಡರೆ ಕೆಲವು ರೈತರು ಜಮೀನುಗಳನ್ನು ಒತ್ತುವರಿ ಮಾಡಿಕೊಂಡು ಅಂತರ್ಜಲಮಟ್ಟ ಕುಸಿಯಲು ಕಾರಣರಾಗಿದ್ದಾರೆ ಎಂಬುದು ನೆನಪಾಗುತ್ತದೆ. ನಮ್ಮ ದೇಶದ ಕಾರ್ಖಾನೆಗಳು ಮತ್ತು ಚರಂಡಿಯ ನೀರು ಶುದ್ಧೀಕರಿಸದೆ ನದಿಗಳಿಗೆ ಬಿಡುತ್ತಾರೆ. ಇದರಿಂದ ನದಿ ನೀರು ಕಲುಷಿತಗೊಂಡು ಅನೇಕ ಜಲಚರಗಳು ಕಣ್ಮರೆಯಾಗುತ್ತವೆ. ಮತ್ತು ನೀರು ಕುಡಿದ ಮನುಷ್ಯ ಮತ್ತು ಜಾನುವಾರುಗಳು ರೋಗಕ್ಕೆ ತುತ್ತಾಗುತ್ತವೆ. ಇದರ ಬಗ್ಗೆ ಇಲ್ಲಿನ ಸರ್ಕಾರಗಳಿಗೆ ಹೊಣೆಗಾರಿಕೆಯೇ ಇಲ್ಲ. ಆದರೆ ಅಮೆರಿಕಾದಲ್ಲಿ ಕಾರ್ಖಾನೆಗಳ ಮತ್ತು ಚರಂಡಿ ನೀರನ್ನು ಶುದ್ಧಮಾಡಿ ನದಿಗೆ ಬಿಡುತ್ತಾರೆ. "ಕಸವನ್ನು ರಸವನ್ನಾಗಿ ಪರಿವರ್ತಿಸಿಕೊಳ್ಳುವುದು ಜೀವನ ಚಕ್ರದಲ್ಲಿ ಅನಿವಾರ್ಯ ಎಂಬುದನ್ನೂ ಪ್ರಕೃತಿ ಮಾನವನಿಗೆ ಕಲಿಸಿಕೊಡುತ್ತದೆ. ತಾನೇ ತಯಾರಿಸಿದ ಗೊಬ್ಬರವನ್ನು ಪರಿಮಳವನ್ನಾಗಿ ರಸವನ್ನಾಗಿ ಮಾರ್ಪಡಿಸಿಕೊಳ್ಳುವ ಅದ್ಭುತಕ್ರಿಯೆ ಅದರ ಒಡಲಿನಲ್ಲಿ ಪ್ರತಿಕ್ಷಣವೂ ನಡೆಯುತ್ತಾ ಇರುತ್ತದೆ. ಯಾವ ದೇಶ ಕಸವನ್ನು ರಸವನ್ನಾಗಿ ಪರಿವರ್ತಿಸಿಕೊಳ್ಳುವ ಶಾಸ್ತ್ರ ಕಲೆಯನ್ನು ಕಲಿತಿದೆಯೋ ಅದು ಸಮೃದ್ಧಿಯಿಂದ ಬದುಕುತ್ತದೆ, ಮಾಲಿನ್ಯದಿಂದ ಪಾರಾಗುತ್ತದೆಂಬ ಸತ್ಯವನ್ನು ಆ ತಜ್ಞರಿಂದ ಕೇಳಿ ಧರ್ಮೇಂದ್ರರು ತಲೆದೂಗುತ್ತಾರೆ."[೧೪] ಹೀಗೆ ಅಲ್ಲಿನ ಜನತೆ ನೈರ್ಮಲ್ಯಕ್ಕೆ ಹೆಚ್ಚಿನ ಆದ್ಯತೆ. ಪರಿಸರ ನೈರ್ಮಲ್ಯ ಕಾಪಾಡದವರಿಗೆ ಅಲ್ಲಿ ದಂಡವನ್ನು ಹಾಕುತ್ತಾರೆ ಎಂದು ತಿಳಿದಾಗ ಅಲ್ಲಿನ ಜನರ ಮನೋಭಾವ ಅರ್ಥವಾಗುತ್ತದೆ.

ನಮ್ಮಲ್ಲಿ ಎಲ್ಲಿ ಅಂದರೆ ಅಲ್ಲಿ ಕಸಕಡ್ಡಿಗಳ ರಾಶಿ, ರಸ್ತೆಗಳ ಮೇಲೆ ಎಂಜಲು ಉಗಿಯುವುದು, ತಿಂಡಿ ತಿಂದು ಪೊಟ್ಟಣಗಳನ್ನು ಎಸೆದು ಹೋಗುವುದು ಕಾಣಬಹುದು. ನಮ್ಮ ದೇಶದ ಯಾವುದೇ ಪ್ರವಾಸಿ ಸ್ಥಳಕ್ಕೆ ಹೋದರೆ ನಮ್ಮನ್ನು ಸ್ವಾಗತಿಸುವುದು ಇಂತಹ ಕೊಳಕುಗಳೇ "ಅಮೆರಿಕದಲ್ಲಿ ಕಾಲಿಟ್ಟ ಕೂಡಲೇ ನಮಗೆ ಮೊದಲು ಹೊಳೆಯುವ ಅಂಶ ಅಲ್ಲಿ ಉಗಿಯುವುದಕ್ಕೆ ಅಥವಾ ಸಿಂಬಳ ಎಸೆಯುವುದಕ್ಕೆ ಅಥವಾ ಬಾಳೆಹಣ್ಣು, ಕಿತ್ತಲೆಹಣ್ಣಿನ ಸಿಪ್ಪೆ, ಕಾಗದ ಎಸೆಯುವುದಕ್ಕೆ ಸ್ಥಳವಿಲ್ಲದಿರುವುದು. ಅದನ್ನು ಕಾಗದದ ಚೀಲದಲ್ಲಿ ಹಿಡಿದುಕೊಂಡು, ಅದಕ್ಕೆ ಉಗುಳಿಕೊಂಡು ಕಸದ ಬುಟ್ಟಿಗೆ ಹಾಕುತ್ತಾರೆ"[೧೫] ಎಂದು ಗೊರೂರವರು ತಮ್ಮ ಪ್ರವಾಸದ ಅನುಭವವನ್ನು ತಿಳಿಸುತ್ತಾರೆ. ಅಮೆರಿಕನ್ನರ ಸ್ವಚ್ಛತೆ ನೈರ್ಮಲ್ಯತೆಗೆ ಕೊಡುವ ಗಮನ ಅವರ ಶಿಸ್ತು

---

[೧೪] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೧೪.

ಹೊಣೆಗಾರಿಕೆಯನ್ನು ನಾವು ಜೀವನದಲ್ಲಿ ಅಳವಡಿಸಿಕೊಂಡರೆ, ನಮ್ಮ ದೇಶವು ಕೂಡ ಶುದ್ಧಿಯಾಗಿರುತ್ತದೆ ಎಂಬುದು ತಿಳಿಯುತ್ತದೆ. ಆದರೆ ಇಲ್ಲಿನ ಕೊಳೆತು ನಾರುತ್ತಿರುವ ರಾಜಕೀಯ ಅಸಡ್ಡೆಯ ನಾಯಕರು ಸ್ವಾರ್ಥ ಅಧಿಕಾರಿಗಳು ಸರಿಯಾದ ಶಿಕ್ಷಣ ಮಾರ್ಗದರ್ಶನವಿಲ್ಲದ ಜನರು. ಇದರ ಬಗ್ಗೆ ಗಮನಹರಿಸಬೇಕು. ಪರಿಸರ ನೈರ್ಮಲ್ಯ ನಮ್ಮ ಆರೋಗ್ಯದ ಗುಟ್ಟು ಎಂಬುದು ತಿಳಿಯಬೇಕು. ಆದರೆ ಇಂದು ಸರ್ಕಾರ ಮಾಡುವ ಕಾರ್ಯಕ್ರಮಗಳು ಬರೀ ಅಪ್ರಯೋಜಕವಾಗಿದೆ.

ಅಮೆರಿಕದಲ್ಲಿ "ಶ್ರದ್ಧೆ ಪ್ರಾಮಾಣಿಕತೆಯಿಂದ ಉದ್ಯಾನವನವನ್ನು ರಕ್ಷಣೆ ಮಾಡುವ ಜವಾಬ್ದಾರಿ ಹೊತ್ತಿದ್ದಾರೆ. ಸಾರ್ವಜನಿಕರು ಹೂ ಕೀಳುವುದಾಗಲಿ, ಗಿಡಗಳನ್ನು ನಾಶಗೊಳಿಸುವುದಾಗಲಿ, ಎಲ್ಲೆಂದರಲ್ಲಿ ತಿಂಡಿ ತಿನಿಸುಗಳನ್ನು ತಿಂದು ಕಾಗದ ಹಣ್ಣಿನ ಸಿಪ್ಪೆ ಎಸೆಯುವುದು ಮುಂತಾದ ದುಷ್ಟ ಪ್ರವೃತ್ತಿಗಳಿಂದ ಉದ್ಯಾನವನದ ಸೌಂದರ್ಯ ನಾಶಗೊಳಿಸುವುದಿಲ್ಲ"[೧೬] ಎಂದು ಆರ್ಯಾಂಬ ಪಟ್ಟಾಭಿಯವರು ತಿಳಿಸುತ್ತಾರೆ. ಇವುಗಳನ್ನು ಗಮನಿಸಿದಾಗ ಅಲ್ಲಿನ ಜನರಿಗೆ ಇರುವ ಸಾಮಾಜಿಕ ಪ್ರಜ್ಞೆ, ಆರೋಗ್ಯದ ಬಗ್ಗೆ ಕಾಳಜಿ ಅವರ ಹೊಣೆಗಾರಿಕೆಗಳು ಓದುಗರನ್ನು ಒಂದು ಕ್ಷಣ ಯೋಚಿಸುವಂತೆ ಮಾಡುತ್ತವೆ. ನಮ್ಮ ದೇಶದಲ್ಲಿ ಕೂಡ ಏಕೆ? ಈ ರೀತಿಯಾಗಿ ವ್ಯವಸ್ಥೆ ಕೈಗೊಳ್ಳಬಾರದು? ಎಂಬ ಪ್ರಶ್ನೆ ಮೂಡುತ್ತದೆ. ಅದಕ್ಕೆ ಇಲ್ಲಿನ ಸರ್ಕಾರಗಳು ಜವಾಬ್ದಾರಿಯಿಂದ ವರ್ತಿಸಬೇಕು, ಸರಿಯಾದ ಕಾನೂನುಗಳನ್ನು ತರಬೇಕು. ಮತ್ತು ಜನರಿಗೆ ತಿಳುವಳಿಕೆ ನೀಡಿದಾಗ ಮಾತ್ರ ನಮ್ಮ ದೇಶ ಸಮೃದ್ಧಿಯಿಂದ ಕೂಡಲು ಸಾಧ್ಯವಾಗುತ್ತದೆ.

ಅಮೆರಿಕಾದಲ್ಲಿ ರೈತರ ಮಾರ್ಕೆಟ್ಟುಗಳು ಅದರ ವೈಶಾಲ್ಯವನ್ನು ಲೇಖಕರು ವಿವರಿಸುತ್ತಾರೆ. ಬೆಂಗಳೂರು ಮೈಸೂರುಗಳ ಮಾರ್ಕೆಟ್ಟುಗಳು ಜುಜ್ಜಿಯಾಗಿ ಕಾಣುತ್ತೇವೆ ಎನ್ನುತ್ತಾರೆ. ತರಕಾರಿ ಹಣ್ಣುಗಳ ಎರಡು ಬಗೆಯ ವಿಭಾಗಗಳಿವೆ ಒಂದು ಆಧುನಿಕ ರಾಸಾಯನಿಕ ಗೊಬ್ಬರಗಳ ಬೆಳೆಸಿದ ತರಕಾರಿ ಹಣ್ಣುಗಳು ಎರಡು ತಿಪ್ಪೆಗೊಬ್ಬರ ಬಳಸಿ ಬೆಳೆಸಿದ ತರಕಾರಿ ಹಣ್ಣುಗಳು. "ಹತ್ತಾರು ಬಗೆಯ ಅಣಬೆಗಳನ್ನು ನೋಡಿದಾಗ ಕಣ್ಣುಗಳಿಗೆ ಆನಂದವಾಗುತ್ತದೆ. ನಾಲಿಗೆಯಲ್ಲಿ ನೀರೂರುತ್ತದೆ. ತರಕಾರಿಗಳ ಜೊತೆಗೆ ಅಡುಗೆಯ ಪದಾರ್ಥಗಳೂ, ಸಿದ್ಧ ಆಹಾರ ವಸ್ತುಗಳೂ ದೊರೆಯುತ್ತವೆ. ಸಮುದ್ರದ ಆಹಾರ ಪದಾರ್ಥಗಳಿಗಂತೂ ಲೆಕ್ಕವಿಲ್ಲ. ಹವಾನಿಯಂತ್ರಣ

---

[೧೫] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಮೆರಿಕದಲ್ಲಿ ಗೊರೂರು ಪು. ೩೪.
[೧೬] ಆರ್ಯಾಂಬ ಪಟ್ಟಾಭಿ ವಿದೇಶಿ ಪ್ರವಾಸ, ಪು. ೨೫.

ವ್ಯವಸ್ಥೆಯಿರುವುದರಿಂದ ಪದಾರ್ಥಗಳು ಕೊಳೆಯುವುದಿಲ್ಲ"[೧೭] ಎಂದು ವಿವರಿಸುತ್ತಾರೆ. ಮತ್ತು ಕೆಟ್ಟು ಹೋದ ಅಥವಾ ಇಷ್ಟವಾಗದ ಯಾವ ಸಾಮಾನನ್ನಾದರೂ ಅಲ್ಲಿಯ ವ್ಯಾಪಾರಸ್ಥರು ಹಿಂದಕ್ಕೆ ತೆಗೆದುಕೊಳ್ಳುತ್ತಾರೆ ಎಂಬುದನ್ನು ಓದಿದಾಗ ಬರಿ ಧರ್ಮದ ಮಾತನಾಡುವ ನಾವೆಲ್ಲಿ? ಅವರೆಲ್ಲಿ? ಎಂಬುದು ತಿಳಿದುಬರುತ್ತದೆ. ಮಾರುಕಟ್ಟೆಯ ಸ್ವಚ್ಛತೆ, ನೈರ್ಮಲ್ಯತೆಗಳನ್ನು ಕಂಡಾಗ ಆ ದೇಶದ ಬಗ್ಗೆ ನಿಜಕ್ಕೂ ಓದುಗನಿಗೆ ಹೊಟ್ಟೆಯುರಿ ಶುರುವಾಗುತ್ತದೆ.

ಅಮೆರಿಕಾದಲ್ಲಿ ಪ್ರವಾಸಿಗರು ನೋಡಬೇಕಾದ ಅದ್ಭುತ ದೃಶ್ಯಗಳಲ್ಲಿ ನಯಾಗಾರ ಜಲಪಾತವೂ ಒಂದು. "ಅಂದೊಂದು ಸಂಕ್ಷಿಪ್ತ ಜಗತ್ತು, ಏಕಕಾಲದಲ್ಲಿ ಜಗತ್ತಿನ ಎಲ್ಲ ತೆರನ ಎಲ್ಲ ಜನಾಂಗಗಳ ಮತ್ತು ರಾಷ್ಟ್ರಗಳ ಜನರನ್ನಲ್ಲಿ ನೋಡಬಹುದು. ಅದು ದರಿದ್ರರಿಗೆ ದೂರ, ಶ್ರೀಮಂತರಿಗೆ ಸನಿಹ. ಅದೊಂದು ಸರ್ವಜನಾಂಗೀಯ ವಸ್ತು ಪ್ರದರ್ಶನ ಶಾಲೆ ಎಂದರೂ ಒಪ್ಪುತ್ತದೆ. ಜಲ ವೈಶಾಲ್ಯ ಮತ್ತು ಪ್ರಮಾಣದ ದೃಷ್ಟಿಯಿಂದ ಆ ಜಲಪಾತದ ವೈಭವ ಮನುಷ್ಯನನ್ನು ಮೂಕಗೊಳಿಸುತ್ತದೆ"[೧೮] ಎಂದು ಲೇಖಕರು ಜಲಪಾತದ ಬಗ್ಗೆ ಚುಟುಕಾಗಿ ವಿವರಿಸುತ್ತಾರೆ. ಅವರಿಗೆ ಜೋಗ ಜಲಪಾತದ ಸೊಬಗು ನೆನಪಾಗಿ ಅಲ್ಲಿ ಬಾನನ್ನು ತಿವಿಯುವ ಗಿರಿಶಿಖರಗಳಾಗಲಿ, ಆ ಗಿರಿಗಳ ವಸ್ತ್ರಾಲಂಕಾರಗಳಂತಿರುವ ವನರಾಜಿಯಾಗಲಿ ನಯಾಗರದಲ್ಲಿಲ್ಲ ಎಂದು ಹೇಳುತ್ತಾರೆ. "ನಯಾಗಾರ ಜಲಪಾತವನ್ನು ಜಗತ್ತಿನ ಏಳು ಅದ್ಭುತಗಳಲ್ಲಿ (ವೈಚಿತ್ರ್ಯಗಳಲ್ಲಿ) ಒಂದೆಂದು ಸಾಧಾರಣವಾಗಿ ಹೇಳುತ್ತಾರೆ. ಇದಕ್ಕೆ ಜಲಪಾತದ ಪ್ರಾಕೃತಿಕ ಮಹತ್ ಭೌಮಾ ಮತ್ತು ಮನುಷ್ಯ ನಿರ್ಮಿತ ಯಾಂತ್ರಿಕ ವಿದ್ಯುತ್ ದೀಪ ಪ್ರಭಾ ಜ್ಯೋತಿರ್ಮಯ ವಾತಾವರಣ ಸನ್ನಿವೇಶ ಎರಡೂ ಕಾರಣವಾಗಿದೆ. ಭಾರತದ ಪ್ರಕೃತಿ ವೈಚಿತ್ರ್ಯ, ಸೊಬಗು, ಅಗಾಧತೆ, ವೈವಿದ್ಯ ಎಲ್ಲವೂ ಅಮೆರಿಕಕ್ಕಿಂತ ಹೆಚ್ಚು ಬೃಹತ್ತಿನದು. ಅದೊಂದು ತರದ ಸೊಗಸು ಇದೊಂದು ತರದ ಸೊಗಸು. ನಮ್ಮ ಗೇರುಸೊಪ್ಪ ಜಲಪಾತ ೯೦೦ ಅಡಿಗಳಿಗಿಂತ ಹೆಚ್ಚಾಗಿ, ಕತ್ತೆತ್ತಿ ನೋಡುವುದಕ್ಕೆ ಸಾಧ್ಯವಾಗದೆ ಎತ್ತರದಿಂದ ಚಾಚಿಕೊಂಡಿರುವ ಬಂಡೆಗಳ ಮೇಲೆ ಛಟಫಟನೆ ಬಿದ್ದು ಒಡೆದು ಕೆಳಕ್ಕೆ ಬೀಳುತ್ತವೆ."[೧೯] ಎಂದು ಗೊರೂರು. ಜಲಪಾತದ ಸೊಬಗನ್ನು ವಿವರಿಸುತ್ತಾರೆ. ನಯಾಗಾರ ಜಲಪಾತದ ದೃಶ್ಯ ವೈಭವವನ್ನು "ಧಾರೆ ಧಾರೆಯಾಗಿ, ಅಖಂಡವಾಗಿ ಸುರಿಯುವ ನೀರು. ಅದರಿಂದ ಮೇಲೇಳುವ ಉಗಿ . . . ಆ ಅಪೂರ್ವ ದೃಶ್ಯವನ್ನು ನೋಡಿಯೇ ಅನುಭವಿಸಬೇಕಲ್ಲದೆ ವರ್ಣನೆಗೆ ನಿಲುಕದು. ಕತ್ತಲಲ್ಲಿ ಜಲಪಾತ

---

[೧೭] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. ೨೩೬.
[೧೮] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೮೪.
[೧೯] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಮೆರಿಕಾದಲ್ಲಿ ಗೊರೂರು, ಪು. ೯೫.

ಕಾಣುವ ರೀತಿಯೇ ಬೇರೆ. ಯಾಕೆಂದರೆ ಕೆಂಪು, ಹಳದಿ, ನೀಲಿ, ಬಿಳಿ ಬಣ್ಣದ ಇನ್ನೂರು ಮಿಲಿಯನ್ ಕ್ಯಾಂಡಲ್ ಶಕ್ತಿಯುಳ್ಳ ಸರ್ಚಲೈಟುಗಳನ್ನು ರಾತ್ರಿ ೧೨ ಗಂಟೆಯವರೆಗೆ ಜಲಪಾತದ ಮೇಲೆ ಬಿಡುತ್ತಾರೆ. ಐದು ನಿಮಿಷಗಳಿಗೊಮ್ಮೆ ದೀಪದ ಬಣ್ಣ ಬದಲಾಯಿಸುವುದರಿಂದ ಜಲಪಾತದ ಬಣ್ಣವೂ ಬದಲಾಗುತ್ತದೆ."[೨೦] ಎಂದು ಆರ್ಯಾಂಬ ಪಟ್ಟಾಭಿಯವರು ನಯಾಗಾರ ಜಲಪಾತದ ವೈಭವವನ್ನು ತಿಳಿಸುತ್ತಾರೆ. ಮತ್ತು ನಯಾಗಾರ ಜಲಪಾತದ ಬಗ್ಗೆ ಹೆಚ್ಚಿನ ವಿವರಣೆಗಳನ್ನು ಗೊರೂರು ಮತ್ತು ಆರ್ಯಾಂಬ ಪಟ್ಟಾಭಿಯವರು ತಮ್ಮ ಕೃತಿಗಳಲ್ಲಿ ತಿಳಿಸಿಕೊಡುತ್ತಾರೆ. ಆದರೆ ವಿಸ್ಮಯಗಳ ನಾಡಿನಲ್ಲಿ ಹೆಚ್ಚಾಗಿ ನಯಾಗಾರ ಜಲಪಾತದ ಬಗ್ಗೆ ವಿವರಣೆಗೆ ಹೋಗದೆ, ಸಂಕ್ಷೇಪವಾಗಿ ಸುಂದರವಾಗಿ ಚಿತ್ರಿಸಿದ್ದಾರೆ.

ಅಮೆರಿಕಾದ ಜನರು ಯಾವುದೇ ಪ್ರವಾಸಿ ಸ್ಥಳಗಳ ಪಕ್ಕದಲ್ಲಿ ಆರ್ಥಿಕವಾಗಿ ಪ್ರಬಲವಾಗಲು ಅಲ್ಲಿ ಉದ್ಯಾನವನಗಳು, ಮನರಂಜನೆಯ ಪಾರ್ಕುಗಳು, ಹೋಟೆಲ್‌ಗಳನ್ನು ಸ್ಥಾಪಿಸುತ್ತಾರೆ. ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು ಬಂದ ಪ್ರವಾಸಿಗರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುತ್ತಾರೆ. ಇದರಿಂದ ಹಣಗಳಿಕೆ ಮತ್ತು ದೇಶದ ಆರ್ಥಿಕ ಪರಿಸ್ಥಿತಿಯ ಉತ್ತಮವಾಗುತ್ತದೆ. ಸರಿಯಾದ ಸಮಯಕ್ಕೆ ಅಲ್ಲಿನ ಜನ ತೆರಿಗೆಯನ್ನು ಪಾವತಿಸುತ್ತಾರೆ. ಹೀಗೆ ಪಾವತಿಸಿದ ತೆರಿಗೆಯನ್ನು ಅಲ್ಲಿನ ಸರ್ಕಾರ ಜನರಿಗೆ ಉಪಯೋಗವಾಗುವ ಕೆಲಸಕಾರ್ಯಗಳಿಗೆ ತೊಡಗಿಸಿ ಅವರಿಗೆ ಎಲ್ಲ ರೀತಿಯ ಸೌಕರ್ಯಗಳನ್ನು ಮಾಡಿಕೊಡುತ್ತಾರೆ.

ನಿಸರ್ಗದ ಸಂಪತ್ತನ್ನು ಬಳಸಿಕೊಂಡು ನಿಸ್ವಾರ್ಥ ಸೇವೆಯಿಂದ ಶ್ರಮದಿಂದ ದುಡಿದು ಅಲ್ಲಿಯ ರಾಷ್ಟ್ರೀಯ ಆದಾಯವನ್ನು ಹೆಚ್ಚಿಸುವ ಜನರ ಮನೋಭಾವ ಕೃತಿಯನ್ನು ಓದಿದಾಗ ತಿಳಿದುಬರುತ್ತದೆ. ನಮ್ಮ ದೇಶದಲ್ಲಿ ಯಾರೂ ಕೂಡ ಸರಿಯಾಗಿ ತೆರಿಗೆಯನ್ನು ಪಾವತಿಸದಿರುವುದು ಕಳ್ಳ ಲೆಕ್ಕಗಳನ್ನು ಕೊಡುವುದು, ಸಂಪತ್ತು ಶ್ರೀಮಂತಿಕೆ ಒಂದೇ ಕಡೆ ಶೇಖರಣೆಯಾಗುತ್ತಿದೆ. ಮತ್ತು ಇಲ್ಲಿನ ಸರ್ಕಾರಗಳು, ರಾಜಕೀಯ ನಾಯಕರುಗಳಿಗೆ ಜನರಿಗೆ ಉತ್ತಮವಾದ ವ್ಯವಸ್ಥೆಯ್ನನು ಕಲ್ಪಿಸಬೇಕು. ಅವರಿಗೆ ಮೂಲಭೂತ ಸೌಕರ್ಯಗಳನ್ನು ಮತ್ತು ಅವರಿಗೆ ಸರಿಯಾದ ಪರಿಸರವನ್ನು ಶುದ್ಧತೆಯಿಂದ ಕಾಪಾಡಿಕೊಂಡು ಹೋಗಲು ತಿಳುವಳಿಕೆಯನ್ನು ನೀಡಬೇಕು ಎಂಬ ವ್ಯವಧಾನ ಯಾರಿಗೂ ಇಲ್ಲ. ಎಲ್ಲರಿಗೂ ಹಣ ಮಾಡುವ

[೨೦] ಆರ್ಯಾಂಬ ಪಟ್ಟಾಭಿ, ವಿದೇಶ ಪ್ರವಾಸ, ಪು. ೬೦.

ಉದ್ದೇಶ ಪ್ರಮುಖವಾಗಿದೆ. ನಮ್ಮ ಜನಗಳಿಗೆ ನಮ್ಮ ಪರಿಸರದ ನೈರ್ಮಲ್ಯವನ್ನು ಕಾಪಾಡಬೇಕು. ಪ್ರೇಕ್ಷಣೀಯ ಸ್ಥಳಗಳನ್ನು ಸುಂದರವಾಗಿಡಬೇಕು ಎಂಬ ಕಲ್ಪನೆಯೇ ಅವರಿಗಿಲ್ಲ. ನಮಗೇಕೆ? ಎಂಬ ಉಢಾಫೆತನವನ್ನು ಕಾಣಬಹುದಾಗಿದೆ. ಅಮೆರಿಕ ವಲಸಿಗರ ನಾಡು ಆದರೆ ಅಲ್ಲಿ ಹೋದ ಬೇರೆ ದೇಶದ ಜನ ಅಲ್ಲಿನ ಕಾನೂನು ಕಟ್ಟಲೆಗಳಿಗೆ ಕೊಡುವ ಗೌರವವನ್ನು ನಾವು ಗಮನಿಸಬೇಕು. ಇದರಿಂದ ನಾವು ತಿಳಿದುಕೊಳ್ಳುವ ಅನೇಕ ವಿಷಯಗಳು ಅರಿವಾಗುತ್ತದೆ.

ಅಮೆರಿಕಾದ ಜನರ ಹಾಗೆ ನಾವು ಕೂಡ ನಿಸ್ವಾರ್ಥದಿಂದ ಅಧಿಕ ಶ್ರಮದಿಂದ ದುಡಿದರೆ ಕಾಲಕಾಲಕ್ಕೆ ತೆರಿಗೆಯನ್ನು ಪಾವತಿಸಿದರೆ, ಪ್ರಕೃತಿಯ ಸೊಬಗನ್ನು, ಪ್ರೇಕ್ಷಣೀಯ ಸ್ಥಳಗಳನ್ನು ಇನ್ನೂ ಉತ್ತಮಪಡಿಸಿ ಅಲ್ಲಿಗೆ ಬರುವ ಪ್ರವಾಸಿಗರಿಗೆ ಅನುಕೂಲಗಳನ್ನು ಒದಗಿಸಿ, ಪ್ರೇಕ್ಷಣೀಯ ಸ್ಥಳಗಳ ಅಕ್ಕಪಕ್ಕ ಮನರಂಜನೆಗೆ ವ್ಯವಸ್ಥೆಗೊಳಿಸಿದರೆ ಇದರಿಂದ ಹೆಚ್ಚು ಹೆಚ್ಚು ಪ್ರವಾಸಿಗರನ್ನು ಸೆಳೆಯಬಹುದು ಮತ್ತು ಹೆಚ್ಚಿನ ಆದಾಯವನ್ನು ಗಳಿಸಬಹುದು. ಅಮೆರಿಕದಲ್ಲಿ ಕಷ್ಟಪಟ್ಟು ಕೆಲಸ ಮಾಡುವುದು, ಪ್ರಾಮಾಣಿಕತೆ ಜ್ಞಾನಕ್ಕೆ ಬುದ್ಧಿವಂತಿಕೆಗೆ ಬೆಲೆಕೊಡುವುದು ಇವು ನಾಡನ್ನು ಕಟ್ಟಲು ಪ್ರಮುಖ ಅಂಶವಾಗಿದೆ. ಅಲ್ಲಿನ ಸರ್ಕಾರ ಜನತೆಗೆ ಸರ್ವಸೌಖ್ಯವನ್ನು ಒದಗಿಸುವುದು. ಜನ ಸೇವೆಗೆ ಆಡಳಿತ ಚುರುಕಾಗಿರುವುದು. ಇವು ಅಮೆರಿಕ ದೇಶದಿಂದ ಇತರ ದೇಶದವರು ಕಲಿಯಬೇಕಾದ ಗುಣಗಳಾಗಿವೆ. ಹೀಗೆ ಅಮೆರಿಕ ನಿಸರ್ಗದ ಸಂಪತ್ತನ್ನು ಸದ್ಭಳಕೆ ಮಾಡಿಕೊಂಡು. ವಿದ್ಯುದೀಕರಣ, ಯಾಂತ್ರೀಕರಣ, ಅತ್ಯಾಧುನಿಕ ವಿಜ್ಞಾನಗಳ ಸೌಲಭ್ಯಗಳಿಂದ ಮುಂದುವರಿದಿದೆ. ಇದು ಇತರೆ ದೇಶಗಳಿಗೆ ಮಾದರಿಯಾಗಿದೆ ಎಂಬುದನ್ನು ಲೇಖಕರು ಮನದಟ್ಟು ಮಾಡಿದ್ದಾರೆ.

## ೩. ಘಟನೆಗಳು ಮತ್ತು ಸನ್ನಿವೇಶಗಳ ಚಿತ್ರಣ

ದೇಜಗೌ ರವರು ಅಮೆರಿಕಾ ಪ್ರವಾಸವನ್ನು ಕೈಗೊಂಡು ಅಲ್ಲಿಯ ಅನುಭವಗಳನ್ನು 'ವಿಸ್ಮಯಗಳ ನಾಡಿನಲ್ಲಿ' ಕೃತಿಯಲ್ಲಿ ದಾಖಲಿಸಿದ್ದಾರೆ. ಅವರಿಗೆ ಎದುರಾದ ಅನೇಕ ಸನ್ನಿವೇಶಗಳ ಘಟನೆಗಳ ಚಿತ್ರಣವನ್ನು ಅತ್ಯಂತ ಕುತೂಹಲಭರಿತವಾಗಿ, ರಸಮಯವಾಗಿ ಕೃತಿಯಲ್ಲಿ ಪಡಿಮೂಡಿಸಿದ್ದಾರೆ. ಅಮೆರಿಕಾ ದೇಶದ ಬಗ್ಗೆ ಬೇರೆ ಪ್ರವಾಸ ಕಥನಗಳಿಗಿಂತ ಒಂದು ಭಿನ್ನವಾದ ನೆಲೆಯಲ್ಲಿ ಕೃತಿ ನಿಲ್ಲುತ್ತದೆ. ಹೀಗೆ ಪ್ರವಾಸ ಕಾಲದಲ್ಲಿ ನೋಡಿದ ಪ್ರೇಕ್ಷಣೀಯ ಸ್ಥಳಗಳ ವಿಸ್ತಾರವಾದ ವರ್ಣನೆ ಅದರ, ಇತಿಹಾಸ, ಅಮೇರಿಕನ್ನರ ಜೀವನದ ಮೌಲ್ಯಗಳು, ಆಧುನಿಕ ಸೌಲಭ್ಯಗಳ ಬಳಕೆ ಇವುಗಳ ಬಗ್ಗೆ ತಿಳಿಸಿಕೊಡುತ್ತಾರೆ. ಕೃತಿಯನ್ನು ಓದಿದಾಗ, ಓದುಗನಿಗೆ ವಿಶಿಷ್ಟಾನುಭವವಾಗುತ್ತದೆ.

ಅಮೆರಿಕಾ ದೇಶದ ಜನರ ಚರಿತ್ರೆ, ಸಂಸ್ಕೃತಿ, ನಾಗರಿಕತೆಯ ಜೀವನದರ್ಶನವನ್ನು ಗಮನನಿಸಿದಾಗ ಲೇಖಕರಿಗೆ ಆಶ್ಚರ್ಯವಾಗುತ್ತದೆ. ಅಲ್ಲಿಯ ರೈತನ ಮನೆಯಲ್ಲಿ ಟೆಲಿಫೋನ್, ಟೆಲಿವಿಶನ್; ಸುಂದರ ನಗರಗಳು, ಉತ್ತಮ ಸೌಕರ್ಯ, ಮರುಭೂಮಿಯ ನಾಡಿನಲ್ಲಿ ಸದಾಕಾಲ ನೀರು, ವಿದ್ಯುತ್ ಸರಬರಾಜು ಅವರನ್ನು ಮೂಕರನ್ನಾಗಿಸುತ್ತದೆ. ಅಮೆರಿಕಾಕ್ಕೆ ಹೋದ ಪ್ರಾರಂಭದಲ್ಲಿ ಸವಿತಾದೇವಿಯವರಿಗೆ ಅಡಿಗೆ ಮನೆಗೆ ಹೋಗುವ ಹೆದರಿಕೆಯನ್ನು ವಿವರಿಸುತ್ತಾರೆ. ಅಡುಗೆ ಮನೆಯ ಆಧುನೀಕರಣ, ಯಂತ್ರ ತಂತ್ರಗಳ ಬಗ್ಗೆ ಸರಿಯಾದ ಅರಿವು ಇಲ್ಲದೆ ಕೈಹಾಕುವುದಕ್ಕೂ, ಗುಂಡಿ ಒತ್ತುವುದಕ್ಕೆ ಹೆದರಿಕೆ. "ಸ್ನಾನದ ಮನೆಯ ನೀರು ತೊಟ್ಟಿಯಲ್ಲಿ ಕುಳಿತು, ಒಂದು ಹಿಡಿಯೆಳೆದರೆ ಮರುಳುವ ನೀರು ತಲೆ ಮೇಲೆ ಸುರಿದು, ರಕ್ತದ ಒತ್ತಡ ಹೆಚ್ಚಿ ಹಿಂದಕ್ಕೆ ನಗೆಯುವಂತಾಗುತ್ತದೆ."[೧] ಇಷ್ಟಲ್ಲದೆ ಬಟ್ಟೆ ಒಗೆಯುವ ಯಂತ್ರದ ಒಂದು ಗುಂಡಿಯನ್ನು ಒತ್ತುವ ಬದಲಾಗಿ ಮತ್ತೊಂದು ಗುಂಡಿ ಒತ್ತಿ, ಅದು ಗಡಗಡ ಶಬ್ಧ ಮಾಡುತ್ತದೆ. ಗಾಬರಿಗೊಂಡು ಮಾನವೇಂದ್ರನನ್ನು ಕೂಗುತ್ತಾರೆ. ಧರ್ಮೇಂದ್ರರು ಸುತ್ತಾಟ ಮುಗಿಸಿ ಮನೆಗೆ ಬಂದಾಗ ಹೊಸತರಲ್ಲಿ ಸವಿತಾದೇವಿಯವರು ಬಾಗಿಲು ತೆರೆದಾಗ, "ಗಂಟೆ ಅರಚಿಕೊಳ್ಳಲಾಗಿ, ಇಂದುಮತಿಯವರು ಗಾಬರಿಯಿಂದದ್ದು, ಗುಂಡಿ ಒತ್ತಿ ಸದ್ದು ತಡೆಗಟ್ಟಿ, ಪೋಲೀಸ್ ಸ್ಟೇಷನ್ನಿಗೆ ಫೋನು ಮಾಡಿದ ನಂತರ ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ"[೨] ಹೀಗೆ ಅಲ್ಲಿನ

[೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೯
[೨] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೧೦

ಆಧುನಿಕ ಭದ್ರತೆಯ ವ್ಯವಸ್ಥೆಯನ್ನು ನೋಡಬಹುದು. ಈ ಘಟನೆಗಳು ನಗೆಯನ್ನು ಉಕ್ಕಿಸುತ್ತವೆ. ಹೀಗೆ ಗೊರೂರು ಕೂಡ ಅವರು ಶ್ರೀಮತಿಯವರು ಅಡುಗೆಯ ಮನೆಯ ವಿದ್ಯುತ್ ಒಲೆಯ ಆಫ್ ಆಗದೆ ಪೇಚಾಡಿದ ಪ್ರಸಂಗ. ಒಲೆಯಿಂದ ಹೊಗೆ ಆವರಿಸಿಕೊಂಡಾಗ "ಮಗ್ಗಲು ಮನೆಗಾದರೂ ಹೋಗಿ ಯಾರನ್ನಾದರೂ ಕರೆದುಕೊಂಡು ಬಂದು ತೋರಿಸಿ, ಮನೆಯಲ್ಲಿ ಬೆಂಕಿ ಹೊತ್ತಿಸಿಕೊಂಡೀತು"[೩] ಅವರ ಹೆಂಡತಿ ಅವರನ್ನು ರೇಗಿಸುವುದು. "ನನಗೆ ಇಂಗ್ಲೀಷ್ ಬಂದಿದ್ದರೆ, ನಾನು ಇಷ್ಟು ಹೊತ್ತಿಗೆ ಬೆಂಕಿ ಆರಿಸುವವರನ್ನೇ ಕರೆಸಿ ಬಿಡುತ್ತಿದ್ದೆ"[೪] ಎಂದು ಅವರನ್ನು ಛೇಡಿಸುವುದು ಹಾಸ್ಯದ ಹೊನಲನ್ನು ಹರಿಸುತ್ತದೆ. ಗೊರೂರುರವರು ಈ ಭಾಗವನ್ನು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ.

ಧರ್ಮೇಂದ್ರರರು ಬೆಳಗಿನ ತಿರುಗಾಟಕ್ಕೆ ಹೊರಟಾಗ ಎದುರಿಗೆ ಬರುತ್ತಿದ್ದ ಯುವತಿ 'ಹಾಯ್ ಗುಡ್ ಮಾರ್ನಿಂಗ್' ಎಂದಾಗ, ಧರ್ಮೇಂದ್ರರು "ಅಯ್ಯೋ ದೇವರೆ, ಇವಳಾರು ಗುರುತಿಲ್ಲ. ಪರಿಚಯವಿಲ್ಲ. ಆದರೂ ಮಾತಾಡಿಸುತ್ತಿದ್ದಾಳಲ್ಲ"[೫] ಎಂದು ಸಂದೇಹದಿಂದ ಗಾಬರಿಯಾಗುತ್ತಾರೆ. ಇವರು ಪೇಚಿನ ಪ್ರಸಂಗವನ್ನು ವರ್ಣಿಸುತ್ತಾರೆ. ಒಂದು ಮನೆಯ ಕಾಂಪೌಂಡ್ ಒಳಗೆ ನುಗ್ಗಿದಾಗ ನಾಯಿ ಅಟ್ಟಿಸಿಕೊಂಡು ಬಂದ ಪ್ರಸಂಗವನ್ನು ಹಾಸ್ಯ ಸ್ವಭಾವದ ಮೂಲಕ ಹೇಳುತ್ತಾರೆ.

ಒಂದು ದಿನ ಇಂಡಿಯಾದಲ್ಲಿ ಬಸ್ಸಿನಲ್ಲಿ ಪ್ರಯಾಣಿಸುವಾಗ "ಒಬ್ಬಳು ಕರಿಯ ಹುಡುಗಿ ಬಸ್ ಹತ್ತಿ ಖಾಲಿ ಜಾಗದಲ್ಲಿ ಕೂತಳು. ಕಿಟಕಿ ಬಳಿಯ ಆಸನದಲ್ಲಿ ಕುಳಿತಿದ್ದ ಬಿಳಿಯ ಹುಡುಗನ ಪಕ್ಕದಲ್ಲಿ ಕರಿ ಹುಡುಗಿ ಕುಳಿತುಕೊಂಡ ಎರಡು ಮೂರು ನಿಮಿಷದ ನಂತರ ಮೇಲೆದ್ದು ಬಸ್ಸು ಹೊರಟಾಗ ಅದರ ಬಾಗಿಲ ಬಳಿ ನಿಂತನು. ಆ ಕರಿ ಹುಡುಗಿ ಕುರೂಪಿಯೇನಲ್ಲ. ಉಟ್ಟಬಟ್ಟೆಗಳು ಶುಭ್ರವಾಗಿದ್ದವು. ಅವಳು ಪೂಸಿಕೊಂಡಿದ್ದ ಪರಿಮಳ ಸುತ್ತಲೂ ಹರಡಿಕೊಂಡಿತ್ತು. ಅಂಥವಳ ಸಾನಿಧ್ಯ ಸುಖವನ್ನನುಭವಿಸಲಾರದೆ ಎದ್ದು ಹೋದದ್ದು ನೋಡಿ, ಅವನೊಬ್ಬ ಶುಷ್ಕ ಹೃದಯದ ಅರಸಿಕನಿರಬೇಕೆಂದು ಧರ್ಮೇಂದ್ರರು ಭಾವಿಸುತ್ತಾರೆ. ಸಾರ್ವತ್ರಿಕವಲ್ಲದಿದ್ದರೂ, ಕೆಲವು ಕಡೆಯಾದರೂ ಆ ದೇಶದಲ್ಲಿ ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿಯೂ ಅಸ್ಪೃಶ್ಯತೆ ತಾಂಡವವಾಡುತ್ತಿರುವುದನ್ನು ಕಂಡು ದಾಸ್ಯಕ್ಕೆ ಕೊನೆಯುಂಟೆ ಎಂದು ಪರಿತಪಿಸುತ್ತಾರೆ."[೬] ದೇಶ

---

[೩] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಮೆರಿಕಾದಲ್ಲಿ ಗೊರೂರು.

[೪] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಮೆರಿಕಾದಲ್ಲಿ ಗೊರೂರು, ಪು. ೨೯.

[೫] ದೇ.ಜ.ಗೌ. ವಿಸ್ಮಯಗಳ ನಾಡಿಯಲ್ಲಿ, ಪು. ೧೨.

[೬] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೬.

ಎಷ್ಟೇ ವೈಜ್ಞಾನಿಕವಾಗಿ ಮುಂದುವರಿದಿದ್ದರೂ ಯಾವುದೋ ಒಂದು ಮೂಲೆಯಲ್ಲಿ ವರ್ಣಭೇದ, ಜಾತಿಯತೆ ಮತ್ತು ಮೂಲಭೂತವಾದಗಳು ಸಂಪೂರ್ಣವಾಗಿ ನಾಶವಾಗಿಲ್ಲವೆಂದು ಕೊರಗುತ್ತಾರೆ.

ಅಮೆರಿಕಾದ ಜನತೆಯ ಸೌಂದರ್ಯ ಪ್ರೇಮ, ಹಸಿರನ್ನು ಪ್ರತಿಯೊಬ್ಬರೂ ಬೆಳೆಸಬೇಕು. ಪರಿಸರವನ್ನು ಚೊಕ್ಕಟವಾಗಿಡಬೇಕು ಎಂಬುದನ್ನು ತಿಳಿಸುತ್ತಾರೆ. ಸ್ಕೈಲಾರ್ಕ್ ಬ್ರೇಲ್ ಇಲ್ಲಿ ಇದು ಮಹಾಮನೆ ಆ ಭಾಗದಲ್ಲಿ ಮೊದಲು ಖರ್ಜೂರದ ತೋಟಗಳಿದ್ದವು. ಅವುಗಳ ನೆನಪಿಗೆ ಪ್ರತಿಯೊಂದು ಮನೆಯ ಮುಂದೆ ಖರ್ಜೂರದ ಮರವನ್ನು ಪೋಷಿಸಬೇಕು ಎಂಬ ನಿಯಮವನ್ನು ನಗರಸಭೆಯವರು ತಂದಿದ್ದಾರೆ. ಗಿಡಮರ ಹೂಗಳೆಂದರೆ ಅಮೆರಿಕದವರಿಗೆ ತುಂಬ ಪ್ರೇಮ, ಪ್ರತಿ ಋತುವಿನಲ್ಲಿ ಹೂಬಿಡುವ ಗಿಡಗಳನ್ನು ಬೆಳೆಸುತ್ತಾರೆ. ಮನೆಯರ ಸಾಂಸ್ಕೃತಿಕ ಶ್ರೀಮಂತಿಕೆಗೆ ಸಂಕೇತವಾಗಿ ಅವರ ಅಭಿರುಚಿಯನ್ನು ತೋರಿಸುತ್ತದೆ. ಇದು ನೋಡುಗರ ಕಣ್ಣಿಗೆ ಆನಂದ ತರುತ್ತದೆ. ನಮ್ಮವರು ತಮ್ಮ ಮನೆಯ ಸುತ್ತ ಕಸಕಡ್ಡಿಗಳ ರಾಶಿಯೇ ಬಿದ್ದಿದ್ದರೂ ಅದರ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಪರಿಸರವನ್ನು ಸ್ವಚ್ಛವಾಗಿ ನಿರ್ಮಲವಾಗಿಟ್ಟುಕೊಳ್ಳುವ ಬಯಕೆ ನಮ್ಮವರಿಗಿಲ್ಲ. ಇದನ್ನು ನೋಡಿ ನಮ್ಮವರು ಕಲಿಯಬೇಕು. ಇರುವ ಮರಗಿಡಗಳನ್ನು ಕಡಿದು ನಾಶ ಮಾಡುತ್ತಿದ್ದೇವೆ. ಪ್ರಕೃತಿಯ ನಾಶದ ಜೊತೆಗೆ ನಾವು ಕೂಡ ನಾಶವಾಗುತ್ತಿದ್ದೇವೆ.

ಟೆಕ್ಸಾಸ್ ಕಡೆ ಪ್ರಯಾಣ ಮಾಡಲು ಬಸ್ಸಿನಲ್ಲಿ ಹೋಗುವಾಗ ಚಾಲಕನ ಸಹನಶೀಲತೆಯನ್ನು ಗಮನಿಸುತ್ತಾರೆ. ಬಸ್ಸಿನೊಳಗೆ ೩೫ ವರ್ಷದ ಒಬ್ಬ ಹೆಂಗಸು ಮತ್ತು ಉಳಿದವರೆಲ್ಲ ಮುದುಕರು. ಅವರು ಲಿಂಗತಾರತಮ್ಯದ ಬಗ್ಗೆ ಮಾತನಾಡುತ್ತಾರೆ. ಗಂಡು ಹೆಚ್ಚು ಎಂದು ಮುದುಕ ವಾದಿಸಿದರೆ, ಹೆಣ್ಣೇ ಶ್ರೇಷ್ಠ ಎಂದು ಹೆಂಗಸು ವಾದಿಸುತ್ತಾಳೆ. ಶಿಕ್ಷಣದಲ್ಲಿ ಮುಂದುವರೆದಿರುವ ದೇಶದಲ್ಲಿ ಇನ್ನು ಲಿಂಗ ತಾರತಮ್ಯತೆ ಇರುವುದನ್ನು ಗಮನಿಸಿ ಧರ್ಮೇಂದ್ರ ಅವರ ಹರಟೆಯಲ್ಲಿ ಭಾಗವಹಿಸುವುದಿಲ್ಲ. ಅವಳು ಇಂದಿರಾಗಾಂಧಿಯ ಬಗ್ಗೆ ಮಾತನಾಡುತ್ತಾಳೆ. "ಹೌದು ಭಾರತದಲ್ಲಿ ಪುರುಷರೇ ಇಲ್ಲವೆನ್ನುವಷ್ಟರ ಮಟ್ಟಿಗೆ ಸ್ತ್ರೀ ರಾಜ್ಯಭಾರ ನಡೆಯುತ್ತಿದೆ. ಈ ಒಂದು ನಿದರ್ಶನದಿಂದಲೆ ಭಾರತೀಯರಿಗೆ ಮಹಿಳೆಯಲ್ಲಿರುವ ಗೌರವ ವ್ಯಕ್ತವಾಗುತ್ತದೆ." (ಪು.೩೬)

ನ್ಯೂಯಾರ್ಕ ನಗರ ಇಡೀ ಜಗತ್ತಿನ ನರವ್ಯೂಹ ಕೇಂದ್ರವಾಗಿದೆ (ಪು. ೨೬೮) ಎಂದು ಹೇಳುತ್ತಾರೆ. ಪ್ರಪಂಚದ ವ್ಯಾಪಾರ ವಾಣಿಜ್ಯ ಹಣಕಾಸಿನ ಕೇಂದ್ರ. ಇಲ್ಲಿ ಅನೇಕ ಗಗನಚುಂಬಿ ಕಟ್ಟಡಗಳಿವೆ. ಅದರಲ್ಲಿ "ಎಂಪೈರ್ ಸ್ಟೇಟ್ ಕಟ್ಟಡ ಮತ್ತು ವರ್ಲ್ಡ್ ಟ್ರೇಡ್ ಕೇಂದ್ರಗಳನ್ನು

ನೋಡದಿದ್ದರೆ ಸ್ವರ್ಗಕ್ಕೆ ಟಿಕೇಟು ಸಿಗುವುದಿಲ್ಲ."[೭] ೧೯೩೧ರಲ್ಲಿ ಕಟ್ಟಿ ಪೂರೈಸಲಾದ ೧೪೭೨ ಅಡಿ ಎತ್ತರದ ೧೦೨ ಮಹಡಿಗಳುಳ್ಳ ಕಟ್ಟಡ. "ಎಂಪೈರ್ ಸ್ಟೇಟ್ ಭವನವನ್ನು ಜಗತ್ತಿನ ಎಂಟನೇ ಆಶ್ಚರ್ಯ"[೮] ಎಂದು ಗೊರೂರು ಬಣ್ಣಿಸುತ್ತಾರೆ. ಆ ಎತ್ತರದಲ್ಲಿ ನಿಂತು ಸುತ್ತಲ ನೂರಾರು ಮೈಲಿಗಳ ವಿಸ್ತಾರ ಜಗತ್ತನ್ನು ೬೦ ಮೈಲಿ ದೂರದ ಸಮುದ್ರದಲ್ಲಿ ಸಂಚರಿಸುತ್ತಿದ್ದ ಹಡಗುಗಳನ್ನು ನೋಡಿದಾಗ, ನಾನು ನನ್ನ ಸಣ್ಣ ಹಳ್ಳಿ ಇವೆಲ್ಲ ಮರತೇ ಹೋಗಿ, "ನಾನು ವಿಶಾಲ ಜಗತ್ತಿನ ಭಾಗವು ಅಖಿಲ ಮಾನವ ಕೋಟಿಯ ಭಾಗವೂ ಆದ ಅನುಭವವುಂಟಾಯಿತು"[೯] ಎಂದು ಅಮೆರಿಕಾದಲ್ಲಿ ಗೊರೂರು ಕೃತಿಯಲ್ಲಿ ಗೊರೂರು ತಮ್ಮ ಅನುಭವವನ್ನು ಬಣ್ಣಿಸುತ್ತಾರೆ.

ಈ ಕಟ್ಟಡಗಳಿಗೆ ರಾತ್ರಿ ವೇಳೆ ವಿವಿಧ ವರ್ಣಮಯ ದೀಪಾಲಂಕಾರ ಜಗಜಗಿಸುವಾಗ, ಆಗಸದ ತಾರೆಗಳೆಲ್ಲ ಮೇಳವಿಸಿ ಕೆಳಗಿಳಿದಂತಾಗಿ ಅನಿರ್ವಚನೀಯ ಸೌಂದರ್ಯ ಸೃಷ್ಟಿ ನಿರ್ಮಾಣವಾಗುತ್ತದೆ."[೧೦] ಬಾಹ್ಯಕಾರದ ದೃಷ್ಟಿಯಿಂದ ಮೇಲ್ಕಾಣಿಸಿದ ಗಗನ ಸೌಧಗಳಿಗೆ ಸಮಸ್ಯೆಯಿಲ್ಲದ, ಆದರೆ ಮೌಲ್ಯಾರ್ಥ ಮಹತ್ವದ ದೃಷ್ಟಿಯಿಂದ ಜಗತ್ತಿನಲ್ಲಿ ಯಾವ ಸಂಸ್ಥೆಯೂ ಸಾಟಿಯಾಗದ ಪ್ರಪಂಚ ಸಂಸ್ಥೆ"[೧೧] ಎಂದು ಗಗನಚುಂಬಿ ಕಟ್ಟಡಗಳನ್ನು ವರ್ಣಿಸುತ್ತಾರೆ.

ಅಮೆರಿಕಾದ ಮತ್ತೊಂದು ವಿಶೇಷ ಪ್ರಪಂಚ, ಡಿಸ್ನೆ ಪ್ರಪಂಚ ಇಂದಿನ ಜಗತ್ತಿನ ಏಕೈಕ ಅದ್ಭುತ ಎಂದು ಲೇಖಕರು ವರ್ಣಿಸುತ್ತಾರೆ. ಭೂತವರ್ತಮಾನ ಭವಿಷ್ಯಗಳು ಸಂಗಮಿಸುವ ರೋಮಾಂಚಕಾರಕ ದೃಶ್ಯ ಪರಂಪರೆಯದು. ಜಗತ್ತಿನ ಎಲ್ಲ ಸಂಸ್ಕೃತಿ ಸ್ರೋತ್ರಗಳು ಹರಿದುಬರುವ ಮಹಾಸಾಗರವದು. ಭೂತವರ್ತಮಾನಗಳಿಗೆ ಕನ್ನಡಿಯಾಗಿರುವ, ಭವಿಷ್ಯಕ್ಕೆ ಮುನ್ನುಡಿಯಾಗಿರುವ ಆ ವಿನೂತನ ಪ್ರಪಂಚವನ್ನು ಪ್ರವೇಶಿಸಿದಾಗ, ಶ್ರೀಕೃಷ್ಣನ ವಿಶ್ವರೂಪವನ್ನು ನೋಡಿ ತತ್ತರಿಸಿದ ಅರ್ಜುನನಂತೆ, ಸುಲಭಮತಿಯ ಮಾನವ ತತ್ತರಿಸಿ ಕುಬ್ಜನಾಗಬಹುದು; ಕಲ್ಪನಾ ಪ್ರತಿಭೆಯ ಮಾನವ ಸಾಗರೋಲ್ಲಂಘನ ಪೂರ್ವದ ಆಂಜನೇಯನಂತೆ ವಿಗುರ್ವಿಸಬಹುದು. ಒಂದಲ್ಲ ಒಂದು ದಿನ ಮಾನವನ ಮತಿ ವಿಶ್ವ ವಿಜಯಿಯಾಗಬಲ್ಲುದೆಂಬುದಕ್ಕೆ ಇಲ್ಲಿಯ ವಿಜ್ಞಾನ ತಂತ್ರಜ್ಞಾನಗಳ ಸಾಧನೆ ಮುನ್ಸೂಚಿಯಾಗಲಿದೆ. ಇದರೊಳಗೊಮ್ಮೆ ಸುತ್ತಿದಾಗ ಜಗತ್ತನ್ನೆಲ್ಲ ಪರ್ಯಟನ ಮಾಡಿದ, ಮೂರು ಜನ್ಮಗಳನ್ನೆತ್ತಿ ಬಂದ ಅನುಭವವಾಗುತ್ತದೆ."[೧೨] ಹೀಗೆ ಡಿಸ್ನಿ

---

೭ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೬೯.
೮ ಅಮೆರಿಕಾದಲ್ಲಿ ಗೊರೂರು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪು. ೪೮.
೯ ಅಮೆರಿಕಾದಲ್ಲಿ ಗೊರೂರು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪು. ೫೨.
೧೦ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೬೯-೨೭೦
೧೧ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೭೦.
೧೨ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೩೯.

ಪ್ರಪಂಚದ ಬಗ್ಗೆ ತನ್ಮಯರಾಗಿ ವಿವರಿಸುತ್ತಾರೆ. ಅಲ್ಲಿ ಆಶ್ಚರ್ಯಗಳ ಕಲ್ಪನಾ ದೃಶ್ಯಗಳ ಸರಣಿಯನ್ನು ಕಂಡು ರೋಮಾಂಚಿತರಾಗಿ, ಧನ್ಯತೆಯ ಭಾವದಿಂದ ಸಮಗ್ರವಾಗಿ ವಿವರಿಸುತ್ತಾರೆ. ಡಿಸ್ನೆ ಪ್ರಪಂಚದ ವಿವರಗಳನ್ನು ಓದುತ್ತಿದ್ದಾಗ ಓದುಗನಿಗೆ ನಿಜವಾಗಿಯೇ ತಾನೇ ಡಿಸ್ನೆ ಪ್ರಪಂಚವನ್ನು ಸುತ್ತು ಹಾಕುತ್ತಿರುವ ಅನುಭವವಾಗುತ್ತದೆ. ಓದುಗನನ್ನು ಸೆಳೆದುಕೊಂಡು ಅವನು ಕೃತಿಯಲ್ಲಿ ಲೀನವಾಗುವಂತೆ ದೇಜಗೌರವರು ವಿವರಣೆಯನ್ನು ಕೃತಿಯಲ್ಲಿ ನೀಡುತ್ತಾರೆ.

ಧರ್ಮೇಂದ್ರರು ಒಂದು ಸಾರಿ ಸ್ಯಾನ್ ಆಂಟೋನಿಯಾಗೆ ಹೋಗುವ ವಿಮಾನಕ್ಕಾಗಿ ವಿಮಾನ ನಿಲ್ದಾಣದಲ್ಲಿ ಕಾಯುತ್ತಿರಬೇಕಾದರೆ ಅವರ ಮನಸ್ಸು ಬಾಹ್ಯಮುಖವಾಗಿ ಅವರು ಪ್ರಯಾಣಿಸುವ ವಿಮಾನ ಹೊರಟು ಹೋಗುತ್ತದೆ. ಅವರು ಗಾಬರಿಯಿಂದ ಅಲ್ಲಿನ ಸಿಬ್ಬಂದಿಯನ್ನು ವಿಚಾರಿಸುತ್ತಾರೆ. ಅವರು ನಿಮ್ಮ ಹೆಸರನ್ನು ಕೂಗಿ ಕರೆದವು ಆದರೆ ನೀವು ಸುಮ್ಮನೆ ಕುಳಿತಿದ್ದೀರಿ ಎಂದಾಗ ಅವರ ಮೇಲೆಯೇ ಧರ್ಮೇಂದ್ರರು ತಪ್ಪು ಹೊರಿಸುತ್ತಾರೆ. ಸಹಾಯಕಿ ತನ್ನ ಸಮತೋಲನ ಕಳೆದುಕೊಳ್ಳದೆ ಧರ್ಮೇಂದ್ರರಿಗೆ ಬೇರೆ ವಿಮಾನದಲ್ಲಿ ಪ್ರಯಾಣಿಸಲು ಅವಕಾಶ ಮಾಡಿಕೊಡುತ್ತಾಳೆ. ಅವಳು ಅವರ ಕೈಗೆ ಟಿಕೇಟ್ ಕೊಟ್ಟು ನಿಮಗೆ ಸುಖ ಪ್ರಯಾಣವಾಗಲಿ' ಎಂದವಳು ಹಾರೈಸಿದಾಗ ಅವರ ಕಣ್ಣಿಗೆ ಧರೆಗಿಳಿದ ದೇವತೆಯಂತೆ ಕಾಣುತ್ತಾಳೆ."[೧೩] ಹೀಗೆ ಅಲ್ಲಿನ ಸಿಬ್ಬಂದಿಯ ತಾಳ್ಮೆಯ ಸಹನೆ ಕಳೆದುಕೊಳ್ಳದೆ ಪ್ರಯಾಣಿಕರ ಜೊತೆ ವರ್ತಿಸುವ ರೀತಿಯನ್ನು ಕಂಡು ಅವರಿಗೆ ಕೆಲಸದ ಬಗ್ಗೆ ಇರುವ ಆಸಕ್ತಿಯ ಬಗ್ಗೆ ತಿಳಿದು ಬರುತ್ತದೆ. ಪ್ರಯಾಣಿಕರು ಯಾವುದೇ ರೀತಿಯಲ್ಲಿ ತೊಂದರೆಗೆ ಒಳಗಾಗಬಾರದು ಮತ್ತು ಸಂಸ್ಥೆಯ ಬಗೆ ಕೆಟ್ಟ ಅಭಿಪ್ರಾಯವುಳ್ಳವರಾಗಬಾರದೆಂದು ಅವರೇ ಬೇರೆ ಸಂಸ್ಥೆಯ ವಿಮಾನದ ಟಿಕೇಟ್ ಖರೀದಿಸಿ ನೀಡುತ್ತಾರೆ. ಇಂತಹ ಪ್ರಾಮಾಣಿಕ ಪ್ರಯತ್ನವನ್ನು ಲೇಖಕರು ಗಮನಿಸುತ್ತಾರೆ. ನಮ್ಮ ದೇಶದಲ್ಲಿ ಪ್ರಯಾಣಿಕರ ಜೊತೆ ಅಧಿಕಾರಿಗಳು ವರ್ತಿಸುವ ವರ್ತನೆಗಳನ್ನು ನೋಡಿದಾಗ ನಾಚಿಕೆಯುಂಟಾಗುತ್ತದೆ. 'ಅತಿಥಿ ದೇವೋಭವ' ಎಂಬ ವಾಕ್ಯವನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡರೆ ಅದು ಅಮೆರಿಕದ ಜನತೆಯ ನಡವಳಿಕೆಯಿಂದ ತಿಳಿದುಬರುತ್ತದೆ.

---

[೧೩] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೪೨.

ಹೀಗೆ ಅನೇಕ ಘಟನೆಗಳು ಕೃತಿಯ ತುಂಬ ಕಂಡುಬರುತ್ತದೆ. ಈ ಘಟನೆಗಳ ಮತ್ತು ಸನ್ನಿವೇಶಗಳ ಚಿತ್ರಣವನ್ನು ಕೃತಿಯನ್ನು ಓದಿ ಆನಂದಿಸಬೇಕು. ಪ್ರವಾಸದ ಅನುಭವಗಳನ್ನು ಓದಿ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತದೆ.

# ೪. ಪ್ರವಾಸ ಕಥನದಲ್ಲಿ ಕಾದಂಬರಿಯ ತಂತ್ರ ರೂಪ ಮತ್ತು ಕಥಾ ಚೌಕಟ್ಟು.

ಮನುಷ್ಯ ಹೊರಜಗತ್ತನ್ನು ಬೆರಗುಗಣ್ಣಿನಿಂದ ನೋಡುತ್ತಾನೆ. ಅವನು ಹೊಸ ಪ್ರದೇಶಗಳಿಗೆ ಭೇಟಿಕೊಟ್ಟಾಗ ಅಲ್ಲಿನ ಪರಿಸರ, ನಿಸರ್ಗದ ರಮ್ಯತೆ, ಜನರು ಅವರ ವೇಷಭೂಷಣಗಳು ಅಲ್ಲಿನ ಹಾಡು-ಪಾಡುಗಳು, ನೋವು-ನಲಿವುಗಳನ್ನು ಮೈಯೆಲ್ಲ ಕಣ್ಣಾಗಿ ಗಮನಿಸುತ್ತಾನೆ. ಇದರ ಮೂಲಕ ಅವನು ಹೊಸ ಚೈತನ್ಯ ಪಡೆದುಕೊಳ್ಳುತ್ತಾನೆ. ತನ್ನ ಮನದ ಜಡತ್ವವನ್ನು ಕಳೆದುಕೊಂಡು ಹೊಸ ಹುರುಪಿನಿಂದ ತನ್ನ ಸ್ಥಳಕ್ಕೆ ಬರುತ್ತಾನೆ. ಹೀಗೆ ಕೈಗೊಂಡ ಯಾತ್ರೆಯನ್ನು ಪ್ರವಾಸ ಎಂದು ಕರೆಯಲಾಗುತ್ತದೆ. ಯಾವುದೇ ಸ್ಥಳಕ್ಕೆ ಹೋದರೂ ಸರಿಯೇ ಅವನು ತನ್ನ ಸ್ಥಳದಿಂದ ಬೇರೆ ಸ್ಥಳಕ್ಕೆ ಹೋಗುವುದು ಪ್ರವಾಸವಾಗುತ್ತದೆ.

ತನ್ನ ಮನಸ್ಸಿನ ಜಡತ್ವ ನೀಗಿಸಿಕೊಳ್ಳಲು ಅಥವಾ ಹೊಸ ಪ್ರದೇಶಗಳನ್ನು ನೋಡಲು ಹೋದ ಪ್ರವಾಸಿಗ ಅಲ್ಲಿ ತಾನು ಕಂಡ, ಅನುಭವಿಸಿದ ಅನುಭವಗಳನ್ನು ಅಕ್ಷರ ರೂಪದಲ್ಲಿ ಅದನ್ನು ಅಭಿವ್ಯಕ್ತಿಸಿ ಓದುಗರಿಗೆ ನೀಡುವುದನ್ನು ಪ್ರವಾಸ ಸಾಹಿತ್ಯ ಎಂದು ಕರೆಯಲಾಗುತ್ತದೆ. ತನ್ನ ಸೃಜನ ಶೀಲತೆಯ ಮೂಲಕ, ತನ್ನ ಕಲ್ಪನಾ ಸಾಮರ್ಥ್ಯದ ಮೂಲಕ ತಾನು ಕಂಡ ಸ್ಥಳಗಳನ್ನು ವರ್ಣಿಸಿ ಹೇಳುತ್ತಾನೆ. ಆದರೆ ಕೆಲವು ಮಾತ್ರ ಸಾಹಿತ್ಯ ಕೃತಿಗಳಾಗಿ ಪ್ರಚಾರ ಪಡೆದಿದೆ. ಕೆಲವು ಗೌಣವಾಗುತ್ತದೆ. ಇದಕ್ಕೆ ಲೇಖಕನ ಪ್ರತಿಭೆ ಸೃಜನಶೀಲತೆಯೇ ಕಾರಣವಾಗುತ್ತದೆ.

ಪ್ರವಾಸ ಸಾಹಿತ್ಯ ಗದ್ಯ ರೂಪದಲ್ಲಿಯೇ ಹೆಚ್ಚು ಜನಪ್ರಿಯ ಮತ್ತು ಪ್ರಚಾರಕ್ಕೆ ಬಂದ ಸಾಹಿತ್ಯ ಪ್ರಕಾರವಾಗಿದೆ. ಹೀಗೆ ಗದ್ಯ ರೂಪದಲ್ಲಿ ರಚಿತವಾಗುತ್ತಿದ್ದ ಪ್ರವಾಸ ಸಾಹಿತ್ಯದ ದಿಕ್ಕನ್ನು ಕಾದಂಬರಿಯ ರೂಪಕ್ಕೆ ತಿರುಗಿಸಿದವರು ಮೊದಲಿಗೆ ಕಾರಂತರು. ಶಿವರಾಮ ಕಾರಂತರ 'ಆಳ ನಿರಾಳ' ನಿಸ್ಸಂಶಯವಾಗಿ ಸಾಮಾಜಿಕ ಕಾದಂಬರಿ, ಅಲ್ಲಿ ಗಟ್ಟಿಯಾದ ಒಂದು ಕಥೆಯಿದೆ. ಕಥೆಗೆ ಸಂಬಂಧಿಸಿದಂತೆ ಪಾತ್ರಗಳಿವೆ. ಕಾರಂತರು ಪ್ರವಾಸ ಪ್ರಿಯರಾದ್ದರಿಂದ ಕಾದಂಬರಿಗೆ ತಮ್ಮ ಪ್ರವಾಸ ಕಥನವನ್ನು ಹೊಂದಿಸಿರುವರು. ಉತ್ತರ ಭಾರತ ಪ್ರವಾಸ ಕೈಗೊಂಡ ಯಾತ್ರಿಕರ ಭಿನ್ನ ವ್ಯಕ್ತಿತ್ವಗಳ ಸಮಾವೇಶ ಕಾದಂಬರಿಯಲ್ಲಾಗಿದೆ. ಕಾರಂತರ ಪ್ರತಿನಿಧಿಯಾಗಿ ಕಲಾವಿದ ದೇಸಾಯಿ ಆ ಕಾದಂಬರಿಯಲ್ಲಿ ತನ್ನ ವೈಚಾರಿಕ ಪ್ರಜ್ಞೆಯನ್ನು ಕಾದಂಬರಿ ಉದ್ದಕ್ಕೂ ಪ್ರಕಟಪಡಿಸುವನು.

ಕನ್ನಡದಲ್ಲಿ ಕಾದಂಬರಿ ಮಾಧ್ಯಮದಲ್ಲಿ ಪ್ರವಾಸ ಸಾಹಿತ್ಯಕ್ಕೆ ಒಂದು ಅಪರೂಪದ ಕೊಡುಗೆಯಾಗಿದೆ. ಇದು ಕಾದಂಬರಿ ರೂಪದ ಮೊದಲ ಸಾಹಿತ್ಯವಾಗಿದೆ.[೧]

ದೇಜಗೌ ರವರ 'ವಿಸ್ಮಯಗಳ ನಾಡಿನಲ್ಲಿ' ಅಮೆರಿಕಾದ ಪ್ರವಾಸ ಕಥನ ದೇಜಗೌ ರವರು ಪ್ರವಾಸದ ಅನುಭವಗಳನ್ನು ಕಾದಂಬರಿಯ ರೂಪದಲ್ಲಿ ಬಳಸಿದ್ದಾರೆ. "ಕಥನ ನಿರೂಪಣೆಗಾಗಿ ಇಲ್ಲಿ ಕಾದಂಬರಿಯ ತಂತ್ರವನ್ನು ಬಳಸಿಕೊಳ್ಳಲಾಗಿದೆ. ವಸ್ತು ಸ್ಥಿತಿಯ ನೈಜ ಚಿತ್ರಣಕ್ಕೆ ಉತ್ತಮ ಪುರುಷಕ್ಕಿಂತ, ಪ್ರಥಮ ಪುರುಷದ ಬಳಕೆಯೇ ಮೇಲೆಂದು, ಕಥನಕಾರ ಸಾಕ್ಷೀಭೂತವಾಗುಳಿಯುವುದೆ ಸರಿಯೆಂದು ನನಗನ್ನಿಸಿದ್ದರಿಂದ ಇಡೀ ಕಥೆಯನ್ನು ಪ್ರಥಮ ಪುರುಷಾರ್ಥದಲ್ಲಿ ಬೆಳಸಲಾಗಿದೆ. ಪ್ರಥಮ ಪುರುಷದಲ್ಲಿ ಕಥನಿಸುವಾಗ ಕಥನಕಾರನಿಗೆ ಹೆಚ್ಚು ಸ್ವಾತಂತ್ರ್ಯವಿದೆಯಂದೇ ನನ್ನ ನಂಬಿಕೆ. ಇತರರ ಮಟ್ಟಿಗೆ ಈ ನಂಬಿಕೆ ಎಷ್ಟು ನಿಜವೋ ಕಾಣೆ. ಅದೇನೇ ಇರಲಿ, ಹಳೆಯ ಜಾಡನ್ನು ಬಿಟ್ಟು, ವಿನೂತನ ವಿಧಾನವನ್ನವಲಂಬಿಸಿದ್ದರಿಂದ ನನಗಂತು ಹಳೆಯ ಸುಂಕು ಮುರಿದ ಸಮಾಧಾನವಿದೆ; ಇದು ಓದುಗರಿಗೆ ಈಷತ್ತಾದರೂ ಹಿಡಿಸುವ ಪಕ್ಷಕ್ಕೆ ನನಗೆ ತೃಪ್ತಿಯಾಗುತ್ತದೆ."[೨] ಎಂದು ಕೃತಿಯ ಪ್ರವೇಶದಲ್ಲಿಯೇ ಹೇಳಿಕೊಂಡಿದ್ದಾರೆ.

ದೇಜಗೌ ರವರು 'ವಿಸ್ಮಯಗಳ ನಾಡಿನಲ್ಲಿ' ಕೃತಿಯಲ್ಲಿ ಕಾದಂಬರಿಯ ತಂತ್ರವನ್ನು ಪರಿಮಿತಾರ್ಥದಲ್ಲಿ ಸ್ವೀಕರಿಸಬೇಕಾಗುತ್ತದೆ. ಕಥೆ ನಿರೂಪಣೆಗಾಗಿ ಆ ತಂತ್ರವನ್ನು ಬಳಸಲಾಗಿದೆಯೆ ಹೊರತು ಪಾತ್ರ ರಚನೆಗಲ್ಲ. ಈ ಕೃತಿಯಲ್ಲಿ ಘಟನೆಗಳು ಸನ್ನಿವೇಶಗಳು, ದೃಶ್ಯಗಳು, ವರ್ಣನೆಗಳು ಪ್ರಧಾನವೇ ಹೊರತು ಪಾತ್ರಗಳಲ್ಲ. ಇಲ್ಲಿಯ ಘಟನೆಗಳು ಸನ್ನಿವೇಶ ವರ್ಣನೆಗಳಿಂದ ಪ್ರತ್ಯೇಕವೆನ್ನುವಂತೆಯೂ ಇಲ್ಲ."[೩] ಹೀಗೆ ದೇ.ಜ.ಗೌ. ರವರು ಕಾದಂಬರಿ ತಂತ್ರದ ಬಗ್ಗೆ ವಿವರಣೆ ನೀಡುತ್ತಾರೆ.

ಸಾಹಿತ್ಯದ ಪ್ರಮುಖ ಪ್ರಕಾರಗಳಲ್ಲಿ ಕಾದಂಬರಿ ಪ್ರಕಾರವೊಂದು "ಅತ್ಯಂತ ವೈವಿಧ್ಯಮಯವಾದ ವಿಭಿನ್ನ ರೀತಿಯ ವಸ್ತು ಮತ್ತು ತಂತ್ರಗಳನ್ನುಳ್ಳ ಪುಸ್ತಕಗಳಿಗೆಲ್ಲ ಕಾದಂಬರಿ ಎಂದು ಹೆಸರು ಸಲ್ಲುತ್ತದೆ"[೪] ಎಂದು ಕಾದಂಬರಿ ಬಗ್ಗೆ ಹೇಳುತ್ತಾರೆ. ಇದಕ್ಕೆ ಕಾವ್ಯಕ್ಕಿರುವ ಹಾಗೆ

---

೧. ಡಾ.ವಿದ್ಯಾ[illegible], ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೩೯.

೨ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. IV

೩ ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. V

೪ ಒ.ಎಲ್. ನಾಗಭೂಷಣ, ವಿಮರ್ಶೆಯ ಪರಿಭಾಷೆ, ಪು. ೭೩.

ಛಂದಸ್ಸಿನ ಅವಶ್ಯಕತೆ ಇಲ್ಲ. ಕಾವ್ಯ-ನಾಟಕಗಳಲ್ಲಿ ಬಳಸುವ ಸಾಹಿತ್ಯಕ ಸಂಪ್ರದಾಯಗಳು ಇದಕ್ಕೆ ಇಲ್ಲ. ಕಾದಂಬರಿ ಭಾಷೆಯ ಬಳಕೆಯಲ್ಲಿ ಕಾವ್ಯಗುಣ, ಪಾತ್ರಗಳಸಂಭಾಷಣೆ, ಕಥಾ ಸಂವಿಧಾನಗಳನ್ನು ಬಳಸಿಕೊಂಡಿದೆ. ಹೀಗೆ ಕಾದಂಬರಿಗೆ ಒಂದು ಸಂವಿಧಾನದ ಚೌಕಟ್ಟಿದೆ.

ದೇಜಗೌ ರವರು ಇದುವರೆಗೆ ಬಂದ ಗದ್ಯ ನಿರೂಪಣೆಯಿಂದ ವಿಭಿನ್ನವಾಗಿ ಕೃತಿಯನ್ನು ರಚಿಸುವ ದೃಷ್ಟಿಯಿಂದ ಕಾದಂಬರಿಯ ತಂತ್ರವನ್ನು ಬಳಸಿಕೊಂಡಿದ್ದಾರೆ. ಇಲ್ಲಿಯ ಪಾತ್ರಗಳು ಕೂಡ ಕಾದಂಬರಿಯಲ್ಲಿ ಬರುವ ಪಾತ್ರಗಳಂತೆ ಬರುತ್ತವೆ. ಆದರೆ ಈ ಪ್ರವಾಸ ಕಥನದಲ್ಲಿ ಬರುವ ಪಾತ್ರಗಳು ದೇಜಗೌ ರವರ ಕುಟುಂಬದ ಸದಸ್ಯರುಗಳೇ ಎಂಬುದು ಅವರನ್ನು ಬಲ್ಲವರಿಗೆ ತಿಳಿದುಬರುತ್ತದೆ.

ಸವಿತಾದೇವಿ (ಸಾವಿತ್ರಮ್ಮ), ಧರ್ಮೇಂದ್ರರು (ದೇಜಗೌ) ಇಂದುಮತಿ (ಶಶಿಕಲಾ), ಚಂದ್ರಕಾಂತ (ಚಂದ್ರಶೇಖರ್), ಮಾನವೇಂದ್ರ, ಕಮಲನಯನ, ಅನಿಕೇತನ (ಶಶಿಕಲಾ-ಚಂದ್ರಶೇಖರ್‌ರವರ ಮಕ್ಕಳು) ಇವು ಕಾದಂಬರಿಯಲ್ಲಿ ಬರುವ ಪಾತ್ರಗಳ ಹೆಸರುಗಳಾಗಿವೆ. ಆದರೆ ಇದನ್ನು ಮರೆತು ಓದಿದಾಗ ಕಾದಂಬರಿಯನ್ನು ಓದಿದ ಅನುಭವ ಓದುಗನಿಗೆ ದೊರೆಯುತ್ತದೆ. ಇಲ್ಲಿ ಬೇರೆ ಕಾದಂಬರಿಗಳಂತೆ ಪಾತ್ರಗಳ ಪೋಷಣೆಗೆ ನಾಯಕನ ಸಾಹಸ ಕಾರ್ಯಗಳಿಗೆ ಮತ್ತು ಇಲ್ಲಿ ಯಾವ ಪಾತ್ರಗಳನ್ನು ವೈಭವೀಕರಿಸಿದೆ. ಬರಿ ಪಾತ್ರದ ತಂತ್ರವನ್ನು ಬಳಸಿಕೊಂಡು ಅಮೇರಿಕಾದಲ್ಲಿ ತಾವು ಪಡೆದ ಅನುಭವಗಳನ್ನು ತಿಳಿಸುತ್ತಾರೆ. ಇಲ್ಲಿ ಪಾತ್ರಗಳಿಗಿಂತ ಕೃತಿಯ ಕಥಾ ಉದ್ದೇಶ ಪ್ರಮುಖವಾಗಿದೆ.

ದೇಜಗೌ ರವರು ಭಾಷೆಯ ಬಳಕೆಯಲ್ಲಿಯೂ ಕೂಡ ತಮ್ಮ ಪ್ರತಿಭೆಯ ಸಾಮರ್ಥ್ಯವನ್ನು ಮೆರೆದಿದ್ದಾರೆ. ಕೆಲವು ಕಡೆ ಹಾಸ್ಯವನ್ನು, ಗಂಭೀರತೆಯನ್ನು, ವ್ಯಂಗ್ಯವನ್ನು, ವರ್ಣನೆಗಳನ್ನು ಮಾಡುವಾಗ ಅದನ್ನು ಓದಿದ ಓದುಗ ರೋಮಾಂಚನಗೊಳ್ಳುತ್ತಾನೆ. ಕಥಾ ಚೌಕಟ್ಟು ಕೂಡ ತಮ್ಮ ಮೂಲ ಉದ್ದೇಶದ ಸಾಧನೆಗಾಗಿಯೇ ಅವರು ಬಳಸಿಕೊಂಡಿದ್ದಾರೆ. ಇಲ್ಲಿ ಪಾತ್ರಗಳಿಗೆ ಪ್ರಾಮುಖ್ಯತೆಯಿಲ್ಲದೆ ತಾವು ನೋಡಿದ ಅಮೆರಿಕಾದ ದೇಶದ ಸಾಮಾಜಿಕ ಸಾಂಸ್ಕೃತಿಕ ಬದುಕು, ಅಲ್ಲಿನ ಜನಜೀವನ, ಸಂಪ್ರದಾಯ, ಅವರ ನಡೆ-ನುಡಿಗಳು, ಪ್ರೇಕ್ಷಣೀಯ ಸ್ಥಳಗಳು, ಅವರಿಗೆ ಪರಿಸರದ ಮೇಲಿನ ಕಾಳಜಿ ಇವುಗಳ ಬಗ್ಗೆ ನಿರೂಪಿಸುತ್ತಾರೆ. ಯಾವುದೇ ರೀತಿಯ ಕಾಲ್ಪನಿಕತೆಯ ಸೃಷ್ಟಿಗೆ ಮಹತ್ವವಿಲ್ಲ. ಕಾದಂಬರಿಯ ತಂತ್ರ ಬಳಸಿದರೂ ವಾಸ್ತವಕ್ಕೆ ಹೆಚ್ಚಿನ ಒತ್ತು ನೀಡಿದ್ದಾರೆ.

ಕಾದಂಬರಿಯ ಸಂವಿಧಾನ ತಂತ್ರಗಳು ಕೂಡ ಓದುಗನಿಗೆ ಹೊಸ ಅನುಭವವನ್ನು ಕೊಡಬೇಕು ಎಂಬುದು ಲೇಖಕರ ಅಭಿಪ್ರಾಯವಾಗಿದ್ದು, ಲೇಖಕರು ಧರ್ಮೇಂದ್ರರ ಪಾತ್ರದ ಮೂಲಕ ಅಮೆರಿಕಾ ದೇಶವನ್ನು ಬೆಕ್ಕಸ ಬೆರಗಿನಿಂದ ನೋಡುತ್ತಾರೆ. ಒಬ್ಬ ಪ್ರವಾಸಿಗನಿಗೆ ಆದ ಸಂತೋಷ, ರೋಮಾಂಚನ, ಉಲ್ಲಾಸಗಳನ್ನು ತಾವು ಅನುಭವಿಸಿದ್ದನ್ನು ಧರ್ಮೇಂದ್ರರ ಪಾತ್ರದ ಮೂಲಕ ಓದುಗನಿಗೆ ನೀಡುತ್ತಾರೆ. ಬರೀ ಗದ್ಯದ ನಿರೂಪಣೆಯಲ್ಲಿ ಬಂದ ಪ್ರವಾಸ ಸಾಹಿತ್ಯದಲ್ಲಿ 'ನಾನು' ಎಂಬ ಉತ್ತಮ ಪುರುಷದ ಬಳಕೆಗಿಂತ ಪ್ರಥಮ ಪುರುಷದ ಬಳಕೆ ಕಂಡುಬರುತ್ತದೆ. ಇದು ಕೃತಿಯ ಮೇಲ್ಮಟ್ಟಕ್ಕೇರಲು ಸಹಾಯಕವಾಗಿದೆ.

ಕಾದಂಬರಿಯ ರೂಪವನ್ನು ಲೇಖಕರು ಸಂಪೂರ್ಣವಾಗಿ ಬಳಸಿಕೊಂಡಿದ್ದಾರೆ. ಪ್ರವಾಸ ಕಥನಗಳು ಸಾಮಾನ್ಯವಾಗಿ ಗದ್ಯ ರೂಪದಲ್ಲಿ ನಿರೂಪಣಾ ಶೈಲಿಯಲ್ಲಿರುತ್ತದೆ. ಮತ್ತು ದಿನಚರಿ ರೂಪದಲ್ಲಿರುತ್ತದೆ. ಆದರೆ ದೇ.ಜ.ಗೌ.ರವರು ಕಾದಂಬರಿಯ ರೂಪದಲ್ಲಿ ಕಥೆಯನ್ನು ಹೇಳುತ್ತಾರೆ. ಪ್ರತಿ ಪಾತ್ರಗಳು ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿಕೊಟ್ಟಾಗ ಅಲ್ಲಿ ತಮಗಾದ ಅನುಭವಗಳನ್ನು ಲೇಖಕರು ಕಾದಂಬರಿಯ ಪಾತ್ರಗಳ ಮೂಲಕ ವ್ಯಕ್ತಪಡಿಸುತ್ತಾರೆ. ಲೇಖಕರು ಧರ್ಮೇಂದ್ರರ ಪಾತ್ರದ ಮೂಲಕ ಅಮೆರಿಕಾ ದೇಶದ ವಿಸ್ಮಯ, ಸೃಷ್ಟಿಯ ಬೆರಗು, ಅವರ ನಿಸರ್ಗ ಪ್ರೇಮ, ನಗರದ ಸ್ವಚ್ಛತೆ, ಆಧುನಿಕ ಸಲಕರಣೆಗಳ ಉಪಯೋಗ, ಅವರ ಭೋಗವಿಲಾಸ ಜೀವನ, ಅವರ ಸಾಂಸ್ಕೃತಿಕ–ಸಾಮಾಜಿಕ ಬದುಕಿನ ಮಜಲುಗಳನ್ನು ಮೈಯೆಲ್ಲ ಕಣ್ಣಾಗಿ ವೀಕ್ಷಿಸುತ್ತಾರೆ. ಕೆಲವು ಸ್ಥಳಗಳಲ್ಲಿ ತನ್ಮಯರಾಗುತ್ತಾರೆ. ಸೃಷ್ಟಿ ಸೊಬಗಿಗೆ ಮನಸೋಲುತ್ತಾರೆ. ಮನುಷ್ಯನ ಸಾಹಸಕಾರ್ಯಗಳನ್ನು ನೋಡಿ ಮೂಕಸ್ಮಿತರಾಗುತ್ತಾರೆ. ಕೆಲವು ಸಾರಿ ಆನಂದ ತುಂದಿಲರಾಗುತ್ತಾರೆ. ಹೀಗೆ ತಾವು ಕಂಡುಂಡ ಅನುಭವಗಳನ್ನು ಲೇಖಕರು ಧರ್ಮೇಂದ್ರರ ಪಾತ್ರದ ಮೂಲಕ ನಿರೂಪಿಸುತ್ತಾರೆ. ಇತರ ಪಾತ್ರಗಳು ಕೂಡ ಅವರ ಕುಟುಂಬದವರೇಯಾದರೂ ಹೆಚ್ಚಾಗಿ ಕಾದಂಬರಿಯಲ್ಲಿ ಅದು ಗೊತ್ತಾಗುವುದಿಲ್ಲ. ಸಾಮಾನ್ಯ ಕಾದಂಬರಿಯಂತೆ ಓದುಗನಿಗೆ ಅನುಭವ ನೀಡುತ್ತದೆ.

ಪ್ರವಾಸ ಸಾಹಿತ್ಯ ವ್ಯಕ್ತಿ ನಿಷ್ಠ ಸಾಹಿತ್ಯವಾಗಿದೆ. ಇದು ಸಾಹಿತ್ಯದ ಬೇರೆ ಪ್ರಕಾರಗಳಂತೆ ಅಲ್ಲ. ಇಲ್ಲಿ ಪ್ರವಾಸಿಗನ 'ಗ್ರಹಿಕೆ'ಯನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ಪ್ರವಾಸ ಸಾಹಿತ್ಯದಲ್ಲಿ ಲೇಖಕನ ಗ್ರಹಿಕೆಯ ಶಕ್ತಿಯನ್ನವಲಂಬಿಸಿರುತ್ತದೆ. ಅವನು ನೋಡಿದ ಸ್ಥಳ, ಅಲ್ಲಿನ ಅನುಭವಗಳನ್ನು ತನ್ನ ಮನಸ್ಸಿನಲ್ಲಿ ಗ್ರಹಿಸಿ ಬರೆಯಬೇಕಾಗುತ್ತದೆ. ಅವನು ಮೈಯೆಲ್ಲಾ ಕಣ್ಣಾಗಿರಬೇಕಾಗುತ್ತದೆ. ಮನಸ್ಸು ಸಂವೇದನಾಶೀಲತೆಯಿಂದ ಕೂಡಿರಬೇಕಾಗುತ್ತದೆ. ತಾನು

ನೋಡಿದ ಪ್ರಪಂಚದ ಶ್ರೀಮಂತಿಕೆಯನ್ನು ಬರಹ ರೂಪಕ್ಕೆ ತರುವಾಗ ಅವನ ಅನುಭವ ಪ್ರಪಂಚವನ್ನು ಹೊಂದಿಸಲು ಪರದಾಡಬೇಕಾಗುತ್ತದೆ. ಈ ಸೃಜನತೆಯಿಲ್ಲದೆ ಅನೇಕರು ತಮ್ಮ ಅನುಭವಗಳನ್ನು ದಾಖಲಿಸುವಾಗ ಸೋಲುತ್ತಾರೆ. ಆದರೆ ದೇಜಗೌ ರವರು ಕಾದಂಬರಿಯ ತಂತ್ರದ ಓದುಗನಿಗೆ ಕುತೂಹಲಯುಂಟಾಗುವಂತೆ ಕಥೆಯನ್ನು ನಿರೂಪಿಸಿದ್ದಾರೆ. ಎಲ್ಲೂ ಏಕತಾನತೆಯಿಂದ ಕೂಡಿರದೆ ರಂಜನೀಯವಾಗಿ ನಿರೂಪಿಸಿದ್ದಾರೆ.

ಕಾದಂಬರಿಯ ಸಂವಿಧಾನದ ತಂತ್ರದಂತೆ ಅನುಕರಣೆ, ವ್ಯಂಗ್ಯಗಳನ್ನು ಮಾಡುವುದಕ್ಕಿಂತ ತಾವು ಪಡೆದ ಅನುಭವಗಳನ್ನು ಅಲ್ಲಿನ ವೈರುಧ್ಯಗಳನ್ನು ಅಭಿವ್ಯಕ್ತಗೊಳಿಸಲು ಹೆಚ್ಚು ಒತ್ತುಕೊಟ್ಟಿದಾರೆ. ಕಾದಂಬರಿಯ ದೃಷ್ಟಿಕೋನ ಹೆಚ್ಚಾಗಿ ವಾಸ್ತವದ ಅನುಭವಗಳ ಘಟನೆಗಳನ್ನು ತಿಳಿಸಿಕೊಡುವುದಾಗಿದೆ. ಇಲ್ಲಿ ಕಾಲ್ಪನಿಕತೆಗೆ ಆಸ್ಪದವಿಲ್ಲ. ದೇಜಗೌ ರವರ ನಿರೂಪಣಾ ಶೈಲಿ ಓದುಗರನ್ನು ಗೆಲ್ಲುತ್ತದೆ. ಓದುಗ ಕೂಡ ಇಲ್ಲಿ ಪ್ರವಾಸ ಮಾಡಿದ ಅನುಭವವನ್ನು ಪಡೆಯುತ್ತಾನೆ. ಓದುತ್ತಾ ತನ್ನನ್ನು ತಾನೇ ಮೈಮರೆಯುವಂತೆ ಕೃತಿ ಅವನ್ನು ಆವರಿಸಿಕೊಳ್ಳುತ್ತದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ.

ದೇಜಗೌ ರವರು 'ವಿಸ್ಮಯಗಳ ನಾಡಿನಲ್ಲಿ' ಅಮೆರಿಕೆಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಮುಖಗಳನ್ನು ಮತ್ತು ಅಮೆರಿಕೆಯ ಪ್ರತಿಭೆಯನ್ನು ಸಂಕ್ಷೇಪವಾಗಿಯಾದರೂ ಆದಷ್ಟು ವ್ಯಾಪಕವಾಗಿ ಚಿತ್ರಿಸಬೇಕು. ಅಮೆರಿಕ ಇಡೀ ಜಗತ್ತಿಗೆ ಕಣ್ಣೆಲೆಯಾಗಿ, ಆದರ್ಶವಾಗಿ, ಭವಿಷ್ಯದ ಭರವಸೆಯಾಗಿ ವಿಕಾಸಗೊಳ್ಳಲು ಕಾರಣವಾದ ನಿಸರ್ಗ ಹಾಗೂ ಮನುಷ್ಯ ಶಕ್ತಿಗಳನ್ನು ಅಲ್ಪ ಪ್ರಮಾಣದಲ್ಲಾದರೂ ಕುಂಚಿಸಬೇಕು. ಆದೇಶದ ಸರ್ವತೋಮುಖವಾದ ಅಭ್ಯುದಯಕ್ಕೆ ನಿಸರ್ಗ ಸಂಪತ್ತು ಮಾತ್ರವೇ ಮುಖ್ಯವಲ್ಲ. ಅಲ್ಲಿನ ಜನರ ದುಡಿಮೆ, ಸಾಹಸ ಮನೋಧರ್ಮ, ಆತ್ಮಪ್ರತ್ಯಯ, ಸ್ವಾತಂತ್ರ್ಯವೇ ಮೊದಲಾದ ತತ್ತ್ವಗಳನ್ನೊಳಗೊಂಡ ಅಮೆರಿಕಾ ಸಂಹಿತೆಯನ್ನು ನಮ್ಮ ಜನರಿಗೆ ಮನದಟ್ಟು ಮಾಡಿಕೊಡಬೇಕು. ಜಾತಿಯ ಮತೀಯ ಭಾವನೆಗಳು ಮನೆ ಮತ್ತು ಚರ್ಚುಗಳೊಳಗೆ ಬಂಧನಗೊಳ್ಳಬೇಕೇ ಹೊರತು ಲೌಕಿಕ ವ್ಯವಹಾರಗಳಲ್ಲಿ ವಿಜೃಂಭಿಸಬಾರದು ಎಂಬ ಆ ದೇಶದ ಜನರ ಆಶಯಗಳನ್ನು ಇಂಡಿಯಾದವರಿಗೆ ತಿಳಿಸಬೇಕು" ಎಂಬು ಅಭಿಲಾಶೆಯಂತೆ ತಾವು ಪಡೆದ ಅನುಭವಗಳನ್ನು ಯಾವುದೇ ಮುಚ್ಚು ಮರೆಯಿಲ್ಲದೆ ದಾಖಲಿಸಿದ್ದಾರೆ.

ಹೀಗೆ ಪ್ರವಾಸ ಕಥನ ಸಾಹಿತ್ಯದಲ್ಲಿ ಹೊಸ ಪ್ರಯೋಗವನ್ನು ಕೈಗೊಂಡು ಕಾದಂಬರಿಯ ತಂತ್ರದಲ್ಲಿ ಪ್ರವಾಸ ಅನುಭವಗಳನ್ನು ತಿಳಿಸಿಕೊಟ್ಟಿರುವುದು, ಹೆಸರಿಗೆ ತಕ್ಕಂತೆ ಅಮೆರಿಕಾದ ವಿಸ್ಮಯಗಳನ್ನು ಓದುಗರಿಗೆ ಮನಮುಟ್ಟುವಂತೆ ನಿರೂಪಿಸಿರುವುದು ಅವರ ಸೃಜನಶೀಲತೆಯ ಬರವಣಿಗೆಯ ಮಹತ್‌ನ್ನು ತೋರಿಸಿಕೊಡುತ್ತದೆ. ಅಲ್ಲಿನ ಅನುಭವದ್ರವ್ಯವನ್ನು ಓದುಗ ಹೃದಯದೊಳಗೆ ಹರಿಯುವಂತೆ ಲೇಖಕರು ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಯಶಸ್ಸು ಪಡೆದಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು. ಲೇಖಕ ತಾನು ಪಡೆದ ಅನುಭವಗಳನ್ನು ಅಕ್ಷರ ರೂಪದಲ್ಲಿ ನಿರೂಪಿಸಲು ಬಹಳಷ್ಟು ಪದ ಸಂಪತ್ತಿನ ಕೊರತೆಯಿಂದ ವಿಫಲನಾಗುತ್ತಾನೆ. ಆದರೆ ದೇಜಗೌರವರ ಪದಸಂಪತ್ತು, ಭಾಷೆಯ ಮೇಲಿನ ಹಿಡಿತ ಅವರ ಪ್ರತಿಭೆಯ ಪರಾಕಾಷ್ಟತೆಯನ್ನು ಪೌಂಡಿತ್ಯ ಸೌಜನ್ಯಯುತ ಬರವಣಿಗೆಯನ್ನು ಕೃತಿಯಲ್ಲಿ ಕಾಣಬಹುದಾಗಿದೆ.

## ೫. ಕೌಟುಂಬಿಕ ನೆಲೆಗಟ್ಟು

ದೇಜಗೌ ರವರ 'ವಿಸ್ಮಯಗಳ ನಾಡಿನಲ್ಲಿ, ಪ್ರವಾಸ ಕಥನದಲ್ಲಿ ಭಾರತದಿಂದ ಅಮೆರಿಕಾಕ್ಕೆ ಹೋಗಿ ನೆಲೆಸಿರುವ ಕುಟುಂಬ ಅಲ್ಲಿನ ಪರಿಸರದಲ್ಲಿ ವಾಸಮಾಡಿದರೂ ಭಾರತೀಯ ಸಂಪ್ರದಾಯ, ಸಂಸ್ಕೃತಿಯ ಪಾಲನೆಗಳನ್ನು ಹೇಗೆ ಇನ್ನೂ ಜೀವಂತವಾಗಿರಿಸಿಕೊಂಡಿದ್ದಾರೆ ಎಂಬುದನ್ನು ಕೃತಿಯಲ್ಲಿ ತಿಳಿಸಿದ್ದಾರೆ.

ಧರ್ಮೇಂದ್ರರು ಮತ್ತು ಸವಿತಾದೇವಿಯವರು ಭಾರತದಿಂದ ಮಗಳು, ಅಳಿಯ ಹಾಗೂ ಮೊಮ್ಮಕ್ಕಳನ್ನು ನೋಡಲು ಅಮೆರಿಕಾಗೆ ಹೋಗುತ್ತಾರೆ. ಇವರನ್ನು ಅವರ ಅಳಿಯ ವಿಮಾನ ನಿಲ್ದಾಣದಿಂದ ಮನೆಗೆ ಕರೆದುಕೊಂಡು ಹೋಗುತ್ತಾರೆ. ಮಗಳಾದ ಇಂದುಮತಿಯವರಿಗೆ ಮೈಸೂರು, ಕರ್ನಾಟಕ, ಭಾರತದ ಬಗ್ಗೆ ಇಂದಿನ ವಿಚಾರಗಳನ್ನು ತಿಳಿದುಕೊಳ್ಳುವ ಕುತೂಹಲ ಅವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅವರ ಪ್ರಶ್ನೆಗಳಿಗೆ ಸವಿತಾದೇವಿಯವರು ಉತ್ತರಿಸುತ್ತಾರೆ. ಇಲ್ಲಿ ಅಮೇರಿಕಾದಲ್ಲಿ ನೆಲೆಸಿದರೂ ಕೂಡ ಭಾರತ ದೇಶದ ಬಗ್ಗೆ ಅವರಲ್ಲಿನ ತುಡಿತವನ್ನು ಚಿತ್ರಿಸಿದ್ದಾರೆ.

ಸಂಪ್ರದಾಯ ಮಾನವೀಯ ಮೌಲ್ಯಗಳ, ಸಂಬಂಧಗಳ ಸರಮಾಲೆಯನ್ನು ಹೊಂದಿರುವ ಸಂಸ್ಕೃತಿ ನಮ್ಮದು. ಇಲ್ಲಿ ಹುಟ್ಟಿ ಬೆಳೆದು ಅಮೆರಿಕಾಕ್ಕೆ ಹೋಗಿ ನೆಲೆಸಿದ ಮಾತ್ರಕ್ಕೆ ಇಲ್ಲಿನ ಮಣ್ಣಿನ ಸೊಗಡಿನ ಹಿರಿಮೆಯನ್ನು ಮರೆಯಲಾಗುವುದಿಲ್ಲ. "ಇಪ್ಪತ್ತು ವರ್ಷ ಸುಸಮೃದ್ಧವಾದ ನವೀನ ಸಂಸ್ಕೃತಿಯ ಭೋಗ ಭೂಮಿಯಲ್ಲಿ ನೆಲೆಸಿದ್ದರೂ ಸಂಪತ್ತಿನ ನಡುವಿದ್ದರೂ ಚಂದ್ರಕಾಂತ ಇಂದು ಮತಿಯರು ಎಳ್ಳಷ್ಟೂ ಪೂರ್ವ ಸಂಸ್ಕೃತಿಯನ್ನು ಮರೆತಿಲ್ಲ."[೧] ಎಂಬ ಮಾತನ್ನು ಹೇಳುತ್ತಾರೆ. ಸುಮಾರು ಇಪ್ಪತ್ತು ವರ್ಷಗಳಿಂದ ಅಮೆರಿಕದ ಭೋಗವಿಲಾಸ ಜೀವನವನ್ನು ಮತ್ತು ಶ್ರೀಮಂತ ದೇಶದಲ್ಲಿ ಆಧುನಿಕ ಯುಗದಲ್ಲಿ ಬದುಕುತ್ತಿದ್ದರು. ಅವರಲ್ಲಿ ಭಾರತೀಯ ಸಂಸ್ಕೃತಿ, ಸಂಪ್ರದಾಯನಿಷ್ಠೆಗಳು ಅತಿಥಿ ಸತ್ಕಾರದ ಬಗ್ಗೆ ಭಾರತೀಯರ ಭಾವನೆಗಳು ಯಾವುದೂ ಕೂಡ ಏರುಪೇರಾಗಿಲ್ಲ. ಅವರ ವೇಷಭೂಷಣ, ನಡೆನುಡಿ, ರೀತಿನೀತಿಗಳು ಯಾವುದೇ ಹೊಸ ಸಂಸ್ಕೃತಿಯ ಅಲೆಯೊಳಗೆ ಸಿಕ್ಕಿ, ನಮ್ಮ ಸಂಸ್ಕೃತಿಯು ನಾಶವಾಗಿಲ್ಲ ಎಂಬುದು ಕೃತಿಯನ್ನು ಓದಿದಾಗ ವ್ಯಕ್ತವಾಗುತ್ತದೆ.

---

[೧] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೮.

ಅಮೆರಿಕಾಕ್ಕೆ ಹೋದವರು ಅಲ್ಲಿ ಪರಕೀಯರಂತೆ ಕಾಣಬಾರದು ಎಂದು ಅಲ್ಲಿನ ಮಹಿಳೆಯರಂತೆ, ಗಂಡಸರಂತೆ ಉಡುಪುಗಳನ್ನು, ಉಪಯೋಗಿಸುತ್ತಾರೆ. ತಮ್ಮ ನಡೆನುಡಿ, ಮಾತಿನ ವೈಖರಿಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಆದರೆ ಇಂದುಮತಿಯವರು ಯಾವುದೇ ಬದಲಾವಣೆಗೆ ಒಳಪಡದೆ ಹಾಗೆಯೇ ಇದ್ದಾರೆ. "ಆದರೆ ಇಂದುಮತಿ ನಕ್ಷತ್ರ ಮಂಡಲದ ನಡುವಣ ಚಂದ್ರನಂತೆ ಥೇಟ್ ಕನ್ನಡತಿ ಅರ್ಥಾತ್ ಭಾರತಿಯಾಗಿಯೇ ಉಳಿದಿದ್ದಾರೆ. ಕುಂಕುಮಾಂಕಿತ ಮುಖಿಯಾಗಿ, ವೇಣೀಧರೆಯಾಗಿ ಸದಾ ಸೀರೆಯುಡುಗಯ ನೀರೆಯಾಗಿ ಎಲ್ಲೆಲ್ಲೂ ಹೊಕ್ಕಾಡುವ ನೈತಿಕ ಧೈರ್ಯ ಅವರಿಗಿದೆ."[೨] ಇಂದುಮತಿಯವರು ಅಮೆರಿಕದಲ್ಲಿ ನೆಲಸಿದ್ದರೂ ಅವರು ಅಲ್ಲಿನ ವೇಷಭೂಷಣಗಳಿಗೆ ಮಾರುಹೋಗದೆ ಅಪ್ಪಟ ಭಾರತೀಯ ನಾರಿಯಂತೆ ಸೀರೆಯುಡುವುದು ಕಂಡು ಲೇಖಕರು ಬೆರಗಾಗುತ್ತಾರೆ. ಕನ್ನಡತಿಯಾಗಿ ಅವರು ಸೀರೆಯಲ್ಲಿ ಚಂದವಾಗಿ ಕಾಣುತ್ತಾರೆ. ಸುಸಂಸ್ಕತಿ, ವಿನಯಸಂಪನ್ನತೆ ಅವರಲ್ಲಿ ಹಾಸುಹೊಕ್ಕಾಗಿರುವುದು ಕಂಡುಬರುತ್ತದೆ. ಅಲ್ಲಿನ ವೈಭೋಗ, ಆಡಂಬರಕ್ಕೆ ಬಲಿಯಾಗದೆ ಅವರು ಅಪ್ಪಟ ಕನ್ನಡತಿಯಾಗಿದ್ದಾರೆ.

ಸವಿತಾದೇವಿಯವರಿಗೆ ಮೊಮ್ಮಕ್ಕಳನ್ನೆತ್ತಿಕೊಂಡು ಮುದ್ದಾಡಬೇಕು. ಊರಿಂದ ತಂದ ತಿಂಡಿಯನ್ನು ಹಂಚಬೇಕು ಎನ್ನುವ ತವಕ ಅವರು ಮನೆಗೆ ಹೋದ ತಕ್ಷಣ ಅವರಿಗೆ ಉಂಟಾಗುತ್ತದೆ. ಮಕ್ಕಳೆಂದರೆ ಹಿರಿಯರಿಗೆ ಬಲು ಪ್ರೀತಿ, ಅದರಲ್ಲೂ ಮೊಮ್ಮಕ್ಕಳು ಎಂದರೆ ಅವರಿಗೆ ಪ್ರೀತಿಯಧಾರೆಯನ್ನು ಹರಿಸುವ ಹಂಬಲ. ಅವರನ್ನು ತೊಡೆಯ ಮೇಲೆ ಕೂರಿಸಿಕೊಂಡು, ತಲೆ ನೇವರಿಸಿ, ಮೈಯೆಲ್ಲ ಸವರಿ, ಮುತ್ತಿಟ್ಟು ಆನಂದಪಡುತ್ತಾರೆ. ಅವರಿಗಾಗಿ ಚನ್ನಪಟ್ಟಣದಿಂದ ಅಲ್ಲಿಗೆ ತೆಗೆದುಕೊಂಡು ಹೋಗಿದ್ದ ಬೊಂಬೆಗಳನ್ನು ಅವರಿಗೆ ಕೊಡುತ್ತಾರೆ. ಅಲ್ಲಿನ ಅವರ ಆಟದ ಸಾಮಾನುಗಳನ್ನು ನೋಡಿ ಬಿಡುಗಣ್ಣಾಗಿ ಸವಿತಾದೇವಿಯವರು ಕುತೂಹಲದಿಂದ ನೋಡುತ್ತಾರೆ. ಮೊಮ್ಮಕ್ಕಳು ಮತ್ತು ಅಜ್ಜ-ಅಜ್ಜಿಯವರ ಭಾವನಾತ್ಮಕ ಸಂಬಂಧ ಇಲ್ಲಿ ಮಡುಗಟ್ಟಿನಿಂತಿದೆ. ಭಾರತೀಯರ ವಾತ್ಸಲ್ಯದ ಹೊಳೆಯೇ ಹರಿದಿರುವುದನ್ನು ಕೃತಿಯಲ್ಲಿ ಕಾಣಬಹುದಾಗಿದೆ.

ಅಮೆರಿಕಾದ ಆಹಾರ ಪದ್ಧತಿಯಲ್ಲಿ ಹೆಚ್ಚಾಗಿ ಮಾಂಸಾಹಾರವೇ ಮೊದಲ ಜಾಗ ಪಡೆದಿರುತ್ತದೆ. ಅಮೆರಿಕಾದ ಯಾವುದೇ ಪ್ರೇಕ್ಷಣೀಯ ಸ್ಥಳಗಳಿಗೆ ಹೋದಾಗ ಅಲ್ಲಿನ

---

[೨] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೯.

ಹೋಟೆಲ್‌ಗಳಲ್ಲಿ ಊಟವನ್ನು ಮಾಡಬೇಕಾದಾಗ ಧರ್ಮೇಂದ್ರರಿಗೆ ಸವಿತಾದೇವಿಯವರ ಊಟದ ಬಗ್ಗೆ ಚಿಂತೆಯಾಗುತ್ತದೆ. "ನನ್ನ ಕಡೆಗೇಕೆ ನೋಡುತ್ತೀರಿ? ನನಗೆ ಬ್ರೆಡ್ಡೋ, ತರಕಾರಿಯೋ ಸಿಕ್ಕಿದರೆ ಸಾಕು. ಭೋಜನ ಸವಿಯುತ್ತ ನೀವು ಆನಂದಿಸುತ್ತಿದ್ದರೆ, ನಿಮ್ಮ ಆನಂದವನ್ನು ನೋಡಿ ನಾನು ಸಂತೋಷಿಸುತ್ತೇನೆ."[೩] ಎನ್ನುತ್ತಾರೆ. ಇಲ್ಲಿ ಈ ಭಾಗದಲ್ಲಿ ಧರ್ಮೇಂದ್ರರ ಮತ್ತು ಸವಿತಾದೇವಿಯವರ ದಾಂಪತ್ಯದ ಉನ್ನತ ಶಿಖರದ ಪರಿಚಯವಾಗುತ್ತದೆ. ಗಂಡನ ಸಂತೋಷವೇ ಪರಮಸುಖ ಎಂಬುದನ್ನು ಸವಿತಾದೇವಿಯವರು ಹೇಳುವ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಅವರಿಗೆ ಧರ್ಮೇಂದ್ರರು ಎಲ್ಲಿ ನನ್ನಿಂದ ಅವರು ಊಟ ಮಾಡದೇ ಇರುವರೋ ಎಂಬ ಭಯ, ಅದರಿಂದ ನಿಮ್ಮ ಆನಂದವೇ ನನಗೆ ಪರಮಸಂತೋಷ, ನಿಮ್ಮಲ್ಲಿ ನಾನು ಕಾಣುತ್ತೇವೆ ಎಂದು ಹೇಳುತ್ತಾರೆ. ಅವರ ಆದರ್ಶ ದಾಂಪತ್ಯದ ಪರಿಚಯ ಕೃತಿಯನ್ನು ಓದಿದಾಗ ಓದುಗ ರೋಮಾಂಚನಗೊಳ್ಳುತ್ತಾನೆ.

ಒಂದು ಸಾರಿ ಧರ್ಮೇಂದ್ರರು ಅಮೆರಿಕಾಕ್ಕೆ ಬಂದು ಇಲ್ಲಿನ ಊಟ ತಿಂಡಿಗಳ ಸವಿಯನ್ನು ಸವಿಯದೆ ಹೋದರೆ ಇಲ್ಲಿನ ಜನರ ಜನಜೀವನವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ ಎಂದಾಗ ಸವಿತಾದೇವಿಯವರು "ಇಲ್ಲಿಯವರ ಜೀವನವನ್ನು ಕಟ್ಟಿಕೊಂಡು ನನಗೇನಾಗಬೇಕು? ನಾನು ಬಂದದ್ದು ಮೊಮ್ಮಕ್ಕಳನ್ನು ನೋಡುವುದಕ್ಕೋಸ್ಕರ" ಎನ್ನುತ್ತಾರೆ. ಇಲ್ಲಿ ಅವರಿಗೆ ಅಮೆರಿಕಾದ ವೈಭೋಗ ಜೀವನ ವಿಲಾಸಗಳನ್ನು ನೋಡುವುದಕ್ಕಿಂತ, ಅದನ್ನು ಅನುಭವಿಸುವುದಕ್ಕಿಂತ ಅವರಿಗೆ ಮೊಮ್ಮಕ್ಕಳ ವಾತ್ಸಲ್ಯದ ಸಾಗರದಲ್ಲಿ ಮೀಯಬೇಕೆಂಬ ಹಂಬಲ ಅವರನ್ನು ಅಮೆರಿಕಾಕ್ಕೆ ಕರೆದುಕೊಂಡು ಬಂದಿದೆ. ಅವರಿಗೆ ಮುಖ್ಯವಾಗಿ ಮೊಮ್ಮಕ್ಕಳ ಆಟಪಾಠ, ಮಕ್ಕಳಾಟಗಳ ಬಗ್ಗೆ ಹೆಚ್ಚಿನ ಗಮನ ನೀಡುವುದು ಕಂಡುಬರುತ್ತದೆ. ಇದು ನಮ್ಮ ಸಂಬಂಧಗಳ ಗಟ್ಟಿತನವನ್ನು ಬದುಕಿನಲ್ಲಿ ಬಾಂಧವ್ಯಕ್ಕೆ ಇರುವ ಮಹತ್ವವನ್ನು ಎತ್ತಿ ತೋರಿಸುತ್ತದೆ. ಕೃತಿಯನ್ನು ಓದಿದಾಗ ಕೌಟುಂಬಿಕ ಸಂಬಂಧಗಳ ಗಾಢವಾದ ಅನುಭವ ಉಂಟಾಗುತ್ತದೆ.

ಧರ್ಮೇಂದ್ರ ಮತ್ತು ಸವಿತಾದೇವಿಯವರು ಅಮೆರಿಕಾದಲ್ಲಿ ನೆಲೆಸಿರುವ ಕನ್ನಡಿಗರ ಮನೆಗೆ ಹೋದಾಗ ಪ್ರತಿಯೊಬ್ಬರೂ ಕೂಡ ಇವರನ್ನು ವಿಮಾನ ನಿಲ್ದಾಣಕ್ಕೆ ಬಂದು ಕರೆದುಕೊಂಡು ಹೋಗಿ ಅವರ ಮನೆಯಲ್ಲಿ ನಾಲ್ಕು ದಿನ ಉಪಚಾರದ ವಾತ್ಸಲ್ಯದ ಔದಾರ್ಯದ ಸವಿಸುಖವನ್ನು ಉಣಬಡಿಸುತ್ತಾರೆ. 'ಅತಿಥಿ ದೇವೋಭವ' ಎಂಬ ಭಾರತೀಯರ ಸನಾತನ

[೩] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ ಪು. ೧೯.

ತತ್ವವನ್ನು ಅಮೆರಿಕಾದಲ್ಲಿ ಹೋಗಿ ನೆಲೆಸಿದ್ದರೂ. ಅವರುಗಳು ಯಾವುದನ್ನು ಮರೆತಿಲ್ಲ. ಕುಮಾರಸ್ವಾಮಿ ಪ್ರಸಾದ್ ಮನೆಯವರಾದಿಯಾಗಿ ಎಲ್ಲರೂ ಅತಿಥಿಗಳನ್ನು ಅತ್ಯಂತ ಸಂಭ್ರಮ ಸಡಗರದಿಂದ ಬರಮಾಡಿಕೊಂಡು ಅವರ ಕುಶಲವನ್ನು ವಿಚಾರಿಸಿ. ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿಕೊಡುತ್ತಾರೆ. ಮನೆಗೆ ಬಂದ ಅತಿಥಿಗಳಿಗೆ ಯಾವುದೇ ಕೊರತೆಯಾಗದಂತೆ ವಿಚಾರಿಸಿಕೊಳ್ಳುತ್ತಾರೆ.

"ಇಂದುಮತಿ ಆದರ್ಶಮಾತೆ, ಅವರನ್ನು ನೋಡಿದಾಗಲೆಲ್ಲ ವಿವೇಕಾನಂದರ ತಾಯಿ ಭುವನೇಶ್ವರಿ ದೇವಿಯ ನೆನಪಾಗುತ್ತದೆ. ಮಕ್ಕಳೆಂದರೆ ಅವರಿಗೆ ಪಂಚಪ್ರಾಣ"[೪] ಭಾರತೀಯರಿಗೆ ಮಕ್ಕಳೆಂದರೆ ಬಲು ಅಕ್ಕರೆ, ಭಾರತೀಯ ತಾಯಿ ಮಕ್ಕಳ ಲಾಲನೆ ಪಾಲನೆಯಲ್ಲಿ ಹೆಚ್ಚು ಸಮಯವನ್ನು ಕಳೆಯುತ್ತಾಳೆ. ಮಕ್ಕಳ ಆಟಪಾಟಗಳಲ್ಲಿ ಅವರ ನಲಿವಿನಲ್ಲಿ ದೇವರನ್ನು ಕಾಣುವ ಬಯಕೆ ಅವರಲ್ಲಿ ಹೊಮ್ಮಿರುತ್ತದೆ. ಮಕ್ಕಳಲ್ಲಿ ತಮ್ಮ ದೈವವನ್ನು ಕಾಣುತ್ತಾರೆ. ಇಲ್ಲಿ ಕೂಡ ಇಂದುಮತಿಯವರು ಅಮೆರಿಕದಲ್ಲಿ ಇದ್ದರೂ ಮಕ್ಕಳ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಅವರಿಗಾಗಿ ತಮ್ಮ ಸರ್ವಸ್ವವನ್ನು ಮಾತ್ರವಲ್ಲ, ತಮ್ಮ ಸುಖವನ್ನು ಅವರಿಗಾಗಿ ಧಾರೆಯೆರೆಯುತ್ತಾರೆ. ಅವರೊಡನೆ ಬೇಸರಿಸಿಕೊಳ್ಳದೆ, ತಾಳ್ಮೆಯಿಂದ ಅವರ ಬೇಕು ಬೇಡಗಳ ಅಗತ್ಯಗಳನ್ನು ಕ್ಷಣ ಮಾತ್ರದಲ್ಲಿ ಪೂರೈಸುತ್ತಾರೆ. ಮಕ್ಕಳಿಗೆ ಆರೋಗ್ಯದಲ್ಲಿ ಏರುಪೇರಾದರೆ, ಮಕ್ಕಳಿಗಿಂತ ತಾಯಿ ಹೆಚ್ಚು ನೋವನ್ನು ಅನುಭವಿಸುತ್ತಾಳೆ. ಇಂದುಮತಿಯವರು ಕೂಡ ಮಕ್ಕಳ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿರುವುದು. ಭಾರತೀಯ ಮಾತೆಯ ಆದರ್ಶತೆಯನ್ನು, ವಾತ್ಸಲ್ಯದ ಹಿರಿಮೆಯನ್ನು ಕೃತಿಯನ್ನು ಓದಿದಾಗ ಅನುಭವವಾಗುತ್ತದೆ.

ಅಮೆರಿಕಾದ ಪ್ರವಾಸ ಕೈಗೊಂಡ ಧರ್ಮೇಂದ್ರರಿಗೆ ಇಂದುಮತಿ ಮತ್ತು ಚಂದ್ರಕಾಂತ ಹಾಗೂ ಅವರ ಗೆಳೆಯರು ಅವರನ್ನು ತುಂಬ ಆತ್ಮೀಯತೆಯಿಂದ ನೋಡಿಕೊಳ್ಳುತ್ತಾರೆ. ಪ್ರತಿಯೊಂದು ಪ್ರೇಕ್ಷಣೀಯ ಸ್ಥಳಗಳನ್ನು ತಮ್ಮ ಕೆಲಸಗಳ ಒತ್ತಡಗಳ ನಡುವೆ ಬಿಡುವು ಮಾಡಿಕೊಂಡು ತೋರಿಸಿ ಮನೆಗೆ ಬಂದ ಅತಿಥಿಗಳಿಗೆ ಬೇಸರವಾಗದಂತೆ ನೋಡಿಕೊಳ್ಳುತ್ತಾರೆ. ಭಾರತೀಯ ಸಂಪ್ರದಾಯ, ಆಚರಣೆಗಳು ಯಾವುದೇ ದೇಶದಲ್ಲಿ ನೆಲೆಸಿದ್ದರೂ ಕೂಡ ಅದು ಮರೆಯಾಗುವುದಿಲ್ಲ. ಅದು ನಮ್ಮ ರಕ್ತದಲ್ಲಿ ಹಾಸುಹೊಕ್ಕಾಗಿದೆ ಎಂಬ ಕೌಟುಂಬಿಕ ಚಿತ್ರಣ ಕೃತಿಯಲ್ಲಿ ದೊರಕುತ್ತದೆ.

---

[೪] ದೇ.ಜ.ಗೌ. ವಿಸ್ಮಯಗಳ ನಾಡಿನಲ್ಲಿ, ಪು. ೨೯.

ಹೀಗೆ 'ವಿಸ್ಮಯಗಳ ನಾಡಿನಲ್ಲಿ' ಕೃತಿಯಲ್ಲಿ ಪ್ರವಾಸಕಥನದ ಜೊತೆಯಲ್ಲಿಯೇ ಕೌಟುಂಬಿಕ ನೆಲೆಗಟ್ಟಿನ ಚಿತ್ರಣ ಮೂಡಿಬಂದಿದೆ. ಕಾದಂಬರಿಯ ತಂತ್ರದಲ್ಲಿ ಪ್ರವಾಸ ಸಾಹಿತ್ಯವನ್ನು ರಚಿಸಿರುವುದರಿಂದ ಇಲ್ಲಿ ಕುಟುಂಬದ ಅನುಬಂಧಗಳು ಕೂಡ ಮನೋಜ್ಞವಾಗಿ ಮೂಡಿಬಂದಿದೆ. ಕೃತಿಯಲ್ಲಿ ಲೇಖಕರ ಕುಟುಂಬದ ಚಿತ್ರವನ್ನು ಹಾಕಿರುವುದು ಕೃತಿಗೆ ಒಂದು ಮೆರಗನ್ನು ನೀಡುತ್ತದೆ.

# ಉಪಸಂಹಾರ

ಮನರಂಜನೆಯ ಉದ್ದೇಶ ಮತ್ತು ಹೊಸ ಪ್ರದೇಶಗಳ ಅನ್ವೇಷಣೆ ಮನುಷ್ಯನ ಸ್ವಭಾವದಿಂದಾಗಿ ಅವನು ಒಂದು ಕಡೆಯಿಂದ ಮತ್ತೊಂದು ಹೊಸ ಪ್ರದೇಶವನ್ನು ಹುಡುಕಿಕೊಂಡು ಅಲೆಮಾರಿಯಾಗಿ ಹೋಗುತ್ತಾನೆ. ಹೀಗೆ ಹೊರಟ ಪ್ರವಾಸಿ ತಾನು ಸಂದರ್ಶಿಸಿದ ಸ್ಥಳನಾಮ, ಇತಿಹಾಸ, ಪ್ರಸಿದ್ಧ, ಪ್ರೇಕ್ಷಣೀಯ ಸ್ಥಳಗಳು, ಜನರೊಡನೆ ಒಡನಾಟ, ಅವರ ಭಾಷೆ, ಭಾವ, ಶಿಸ್ತು, ಅಲ್ಲಿನ ಸಂಸ್ಕೃತಿ, ನಿಸರ್ಗದ ರಮ್ಯತೆ ಇವುಗಳನ್ನು ನೋಡಿ ಆನಂದಿಸುತ್ತಾನೆ. ತನ ಜಡಸ್ವಭಾವದಿಂದ ಮಡುಗಟ್ಟಿದ ಮನಸ್ಸಿಗೆ ಹೊಸ ಹೊಳಪುಗಳನ್ನು, ಚೈತನ್ಯವನ್ನು ತುಂಬಿಕೊಳ್ಳುತ್ತಾನೆ. ಹೀಗೆ ಅಲ್ಲಿ ಅನುಭವಗಳನ್ನು ಪಡೆದುಕೊಂಡ ಪ್ರವಾಸಿ ಅದನ್ನು ಮತ್ತೊಬ್ಬರಿಗೆ ತಿಳಿಸುವುದಕ್ಕೆ ಅದನ್ನು ಕೃತಿ ರೂಪದಲ್ಲಿ ಹೊರತರುತ್ತಾನೆ. ಪ್ರತಿಯೊಬ್ಬರೂ ಪ್ರವಾಸವನ್ನು ಕೈಗೊಳ್ಳಲು ಸಾಧ್ಯವಿಲ್ಲ. ವಿದೇಶಗಳ ಸೃಷ್ಟಿ ನೈಜತೆ, ಅಲ್ಲಿ ಮಾನವ ನಿರ್ಮಿತ ಗಗನಚುಂಬಿ ಕಟ್ಟಡಗಳು, ಜಲಪಾತಗಳು ಅಣೆಕಟ್ಟುಗಳು, ಇವುಗಳನ್ನು ನೋಡಿಬಂದವರು ಹೇಳಿದಾಗ ಅವನಿಗೂ ಆ ದೇಶದ ಬಗ್ಗೆ ಅನುಭವಗಳು ದೊರೆಯುತ್ತದೆ. ದೇಶದ ಇತಿಹಾಸ, ಸಾಮಾಜಿಕ ಪರಿಸರದ ಅಧ್ಯಯನ ಮಾಡಲು ಸಹಾಯಕವಾಗುತ್ತದೆ.

ಕನ್ನಡ ಸಾಹಿತ್ಯದಲ್ಲಿ ಪ್ರವಾಸ ಸಾಹಿತ್ಯ ಒಂದು ವಿಪುಲ ಸಾಹಿತ್ಯ ಪ್ರಕಾರವಾಗಿ ಬೆಳೆದುಕೊಂಡು ಬಂದಿದೆ. ಅನೇಕ ಹೆಸರಾಂತ ಲೇಖಕರು ತಾವು ಮಾಡಿದ ಪ್ರವಾಸದ ಅನುಭವಗಳನ್ನು ಕೃತಿಯಲ್ಲಿ ಹೊರತಂದಿದ್ದಾರೆ. ಹಾಗೆ ಗದ್ಯ ನಿರೂಪಣೆ, ದಿನಚರಿ ರೂಪದಲ್ಲಿ ಇದ್ದ ಸಾಹಿತ್ಯ ಪ್ರಕಾರವನ್ನು ಶಿವರಾಮ ಕಾರಂತರು ಮತ್ತು ದೇ.ಜ.ಗೌ.ರವರು ಕಾದಂಬರಿಯ ತಂತ್ರಗಾರಿಕೆಯಲ್ಲಿ ಪ್ರವಾಸ ಕಥನದ ಅನುಭವಗಳನ್ನು ಕಾದಂಬರಿ ರೂಪದಲ್ಲಿ ತಂದು ಯಶಸ್ವಿಯಾಗಿದ್ದಾರೆ. ಪ್ರವಾಸ ಸಾಹಿತ್ಯ ಕಥನಕ್ಕೆ ಹೊಸ ಹಾದಿಯನ್ನು ತೋರಿಸಿದ್ದಾರೆ.

ಪ್ರವಾಸ ಸಾಹಿತ್ಯವನ್ನು ಓದುವುದರಿಂದ ಆ ದೇಶದ ಜನರ ಸಂಸ್ಕೃತಿ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳು ಓದುಗನಿಗೆ ಮನಮುಟ್ಟಿ ಅವರು ಸಾದಿಸಿರುವ ಗುರಿಯನ್ನು ಯಶಸ್ಸುಗಳನ್ನು ನಾವು ಏಕೆ ಸಾಧಿಸಬಾರದು ಎಂಬ ಛಲವುಂಟಾಗುತ್ತದ. ಮತ್ತು ಒಂದು ದೇಶದ ಇತಿಹಾಸವನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ವಿದೇಶಗಳನ್ನು ನೋಡುವ ಭಾಗ್ಯ ಕೆಲವರಿಗೆ ಮಾತ್ರ ಅದರಲ್ಲೂ ಸಿರಿವಂತರಿಗೆ ಮಾತ್ರ. ಇಂಥವರು ಸೀಮಿತ. ಹೀಗಾಗಿ

ಪ್ರವಾಸವನ್ನು ಮಾಡುವ ಭಾಗ್ಯವಿಲ್ಲದವರಿಗೆ ಪ್ರವಾಸ ಸಾಹಿತ್ಯ ಮಹತ್ವವಾದ ಪಾತ್ರವನ್ನು ವಹಿಸುತ್ತದೆ. ಇದರ ಮೂಲಕ ಪ್ರವಾಸದ ಅನುಭವಗಳನ್ನು ಓದುಗ ಪಡೆದುಕೊಳ್ಳುತ್ತಾನೆ.

ಪ್ರವಾಸ ಸಾಹಿತ್ಯದಿಂದ ಮನರಂಜನೆ ಜ್ಞಾನಾಭಿವೃದ್ಧಿ, ಪ್ರಾಪಂಚಿಕ ಸುಖ ಅನುಭವಿಸಲು ಪ್ರವಾಸ ಸಾಹಿತ್ಯದ ಲೇಖಕನಿಗೆ ತಾನು ಪಡೆದ ಅನುಭವಗಳನ್ನು ಗ್ರಹಿಸುವ ಸಾಮರ್ಥ್ಯ ಮತ್ತು ಗ್ರಹಿಸದ ವಿಷಯಗಳನ್ನು ಅಭಿವ್ಯಕ್ತಪಡಿಸುವ ಕಲಾವಂತಿಕೆ ಪ್ರತಿಭೆ ಬೇಕಾಗುತ್ತದೆ. ಇಂಥ ಪ್ರತಿಭೆ ಇರುವವರಿಗೆ ಮಾತ್ರ ಸಾಹಿತ್ಯ ಸೃಷ್ಟಿ ಒದಗಿಬರಲು ಸಾಧ್ಯ. ಇಲ್ಲದಿದ್ದರೆ "ಬಂದ ಪುಟ್ಟ, ಹೋದ ಪುಟ್ಟ" ಎಂಬ ಮಾತಿನಂತಾಗುತ್ತದೆ. ಅನೇಕ ಪ್ರವಾಸಿ ಸಾಹಿತ್ಯಗಳು ಬಂದರೂ ತನ್ನ ಅಂತಸ್ತ್ವದಿಂದ ನೆಲೆಗೊಳ್ಳದೆ ಭಾಷಾಬಳಕೆಯ ಕೊರತೆ, ಪದಸಂಪತ್ತಿನ ಬಳಕೆಯ ಕೊರತೆ, ತಾನು ಕಂಡ ಮತ್ತು ಪಡೆದ ಅನುಭವಗಳನ್ನು ಕೃತಿಯಲ್ಲಿ ನಿರೂಪಿಸಲು ವಿಫಲನಾಗಿ ಕೃತಿಯಲ್ಲಿ ನೋಡಿದೆ. ಬಂದೆ ಎಂದು ಬರೆದರೆ ಅದು ಸಾಹಿತ್ಯವಾಗುವುದಿಲ್ಲ. ಲೇಖಕನಿಗೆ ಸೃಜನತೆ ತಾನು ಕಂಡ ಅನುಭವಗಳನ್ನು ಸ್ಪಷ್ಟವಾಗಿ ನಿರೂಪಿಸುವ ಕತೆಗಾರಿಕೆ, ನೈಪುಣ್ಯತೆ, ಪದಗಳ ಬಳಕೆ, ವಿಶಾಲ ಮನೋಭಾವದ ಚಿಂತನೆಗಳು ಕಂಡುಬರಬೇಕಾಗುತ್ತದೆ.

ಪ್ರವಾಸ ಸಾಹಿತ್ಯ ಬರಿ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದ ಅನುಭವಗಳನ್ನು ಬರೆಯುವುದಕ್ಕೆ ಸೀಮಿತವಾಗಬಾರದು. ಅದು ಆ ದೇಶದ ಇತಿಹಾಸ ಮತ್ತು ಸಾಮಾಜಿಕ ಬದುಕಿನ ಚಿತ್ರಣವನ್ನು ವಿವರಿಸುವ ಗ್ರಂಥವಾಗಬೇಕು. ಏಕೆಂದರೆ ಪ್ರವಾಸ ಕೃತಿಯನ್ನು ಓದಿದಾಗ ಪ್ರಗತಿಗೆ ಕಾರಣವಾದ ಅಂಶಗಳು ಶ್ರಮಿಕವರ್ಗ ಮತ್ತು ಅಲ್ಲಿನ ಪರಿಸರ, ಜನಜೀವನ, ಉಡುಗೆ-ತೊಡುಗೆಗಳು ಅವರ ಆಚಾರ-ವಿಚಾರಗಳು ಇವುಗಳು ಕೃತಿಯಲ್ಲಿ ತಿಳಿದುಬರಬೇಕು. ಹೀಗಾದಾಗ ಮಾತ್ರ ಕೃತಿ ಸಾಫಲ್ಯತೆಯನ್ನು ಪಡೆಯುತ್ತದೆ. ಕಾಕಾ ಸಾಹೇಬ ಕಾಲೇಲಕರರು ಹೇಳುವಂತೆ "ಈಗ ನಮ್ಮ ದೇಶದಲ್ಲಿ ಪ್ರವಾಸದ ಸಾಧನೆಗಳು ಬಹಳಷ್ಟು ಹೆಚ್ಚಿವೆ, ಮತ್ತು ಹೆಚ್ಚುತ್ತಲಿವೆ. ಪೋಟೋಗ್ರಫಿಯ ಕಲೆ ಲಲಿತಕಲೆಯ ಪಂಕ್ತಿಯಲ್ಲಿ ಸೇರುವಷ್ಟು ವಿಕಸಿತವಾಗಿದೆ. ದೇಶ ವಿದೇಶಗಳ ಭಾಷೆಗಳಲ್ಲಿಯ ಪ್ರವಾಸ ವರ್ಣನೆಗಳ ವಾಚನದಿಂದ ನಮ್ಮ ಕಲ್ಪನೆ ಉದ್ದೀಪಿತವಾಗಲು ಶಕ್ಯವಾಗಿದೆ ಎಂದ ಬಳಿಕ ದಾರಿದ್ರ್ಯವನ್ನು ಏಕೆ ದೂರವಾಗಿಸಬಾರದು?"[೧] ಎಂದು ಹೇಳುವ ಮಾತು ಸರ್ವಕಾಲಿಕ ಸತ್ಯವಾಗಿದೆ. ಬೇರೆ ದೇಶಗಳ ಪ್ರವಾಸ ಸಾಹಿತ್ಯ ನಮ್ಮಲ್ಲಿರುವ ಕುಂದುಕೊರತೆಗಳನ್ನು ನಿವಾರಿಸುವ ಆಯುಧಗಳಾಗಬೇಕು. ಮಲಗಿರುವ ಸರ್ಕಾರ

---

[೧] ಎಸ್. ವಿದ್ಯಾಶಂಕರ, ಪ್ರವಾಸೋದ್ಯಮ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಪು. ೧೪೩.

ಮತ್ತು ಜನತೆಯನ್ನು ಎಚ್ಚರಗೊಳಿಸುವ ಸಾಧನಗಳಾಗಬೇಕು. ಈ ಮೂಲಕ ದೇಶದ ದಾರಿದ್ರ್ಯವನ್ನು ದೂರವಾಗಿಸಬೇಕು.

ಹೀಗೆ 'ವಿಸ್ಮಯಗಳ ನಾಡಿನಲ್ಲಿ' ಎಂಬ ದೇಜಗೌರವರ ಪ್ರವಾಸ ಕಥನ ಅಮೆರಿಕಾದ ವಿಸ್ಮಯಗಳನ್ನು ಅವರ ಭೋಗ ವಿಲಾಸ ಜೀವನವನ್ನು ಮತ್ತು ಅವರ ಶ್ರಮದಾಯಕ ದುಡಿಮೆ, ಪ್ರಕೃತಿ ಪ್ರೇಮ, ನಿಸರ್ಗದ ಅದ್ಭುತ ರಮಣೀಯ ದೃಶ್ಯಗಳು, ಆಧುನೀಕತೆಯ ಸ್ಪರ್ಶದ ಅವರ ವೈಭವ ಶೈಲಿ ಜೀವನ ಇವುಗಳ ವಿವರವನ್ನು ಒದಗಿಸುತ್ತದೆ. ಇದು ಪ್ರವಾಸ ಕಥನವಾಗದೆ. ಅಮೆರಿಕಾದ ಬಗ್ಗೆ ವಿವರವಾಗಿ ತಿಳಿದುಕೊಳ್ಳಲು ಒಂದು ಗ್ರಂಥವಾಗಿದೆ.

ಮೇಲ್ಕಂಡ ಅಧ್ಯಾಯಗಳಲ್ಲಿ ಅಮೆರಿಕಾದ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಅಮೆರಿಕೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಎಂಬ ಅಧ್ಯಾಯದಲ್ಲಿ ಅಮೆರಿಕಾ ದೇಶದ ಜನರ ಸೌಜನ್ಯಯುತ ನಡವಳಿಕೆ ಅಲ್ಲಿನ ಶಿಕ್ಷಣ ವ್ಯವಸ್ಥೆ, ಮಕ್ಕಳು ಮತ್ತು ಹಿರಿಯರಿಗೆ ನೀಡುವ ಗೌರವ, ರೈತನ ಸಾಮಾಜಿಕ ಬದುಕು, ಪ್ರಾಣಿ ಪ್ರೇಮಗಳ ಬಗ್ಗೆ ಸವಿವರವಾಗಿ ವಿವೇಚಿಸಲಾಗಿದೆ. ಎರಡನೆಯ ಅಧ್ಯಾಯ ನಿಸರ್ಗ ಸಿರಿ ಮತ್ತು ಸಂಪತ್ತಿನ ಸದ್ಬಳಕೆಯಲ್ಲಿ ಅಮೆರಿಕಾ ದೇಶದ ಜನತೆ ಅಲ್ಲಿನ ನಿಸರ್ಗ ರಮ್ಯತೆಯನ್ನು ಪ್ರವಾಸಿಗರಿಗೆ ಆಕರ್ಷಣೀಯವಾಗಿ ಮಾಡಿರುವುದನ್ನು ಮತ್ತು ಅವರ ಪ್ರಕೃತಿ ಪ್ರೇಮದ ವಿಷಯಗಳನ್ನು ಚರ್ಚಿಸಲಾಗಿದೆ. ಮೂರನೆಯ ಅಧ್ಯಾಯ ಘಟನೆಗಳು ಮತ್ತು ಸನ್ನಿವೇಶಗಳ ಚಿತ್ರಣದಲ್ಲಿ ಲೇಖಕರು ಅನುಭವಿಸಿದ ಘಟನೆಗಳು ಮತ್ತು ಸನ್ನಿವೇಶಗಳ ಚಿತ್ರಣವನ್ನು ದಾಖಲಿಸಲಾಗಿದೆ. "ಪ್ರವಾಸ ಕಥನದಲ್ಲಿ ಕಾದಂಬರಿಯ ತಂತ್ರ ರೂಪ ಮತ್ತು ಕಥಾ ಚೌಕಟ್ಟು" ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಕಾದಂಬರಿ ರೂಪದಲ್ಲಿ ಪ್ರವಾಸ ಸಾಹಿತ್ಯದ ರಚನೆ ಮತ್ತು ತಂತ್ರ ಕಥಾ ಚೌಕಟ್ಟಿನ ಬಗ್ಗೆ ವಿವರವಾಗಿ ನಿರೂಪಿಸಲಾಗಿದೆ. ಹಾಗೆಯೇ ಕೊನೆಯ ಐದನೆಯ ಅಧ್ಯಾಯದಲ್ಲಿ ಕೌಟುಂಬಿಕ ನೆಲೆಗಟ್ಟುವಿನಲ್ಲಿ ಕೃತಿಯಲ್ಲಿ ಮೂಡಿಬಂದಿರುವ ಕೌಟುಂಬಿಕ ಸಾಮರಸ್ಯದ ಬಗ್ಗೆ ವಿವರಿಸಲಾಗಿದೆ.

ಕನ್ನಡದಲ್ಲಿ ಹೆಚ್ಚು ಸಂಖ್ಯೆಯ ಪ್ರವಾಸ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ ಹಿರಿಮೆ ದೇಜಗೌ ಅವರಿಗೆ ಸಲ್ಲುತ್ತದೆ. ಅಮೆರಿಕ, ಇಂಗ್ಲೆಂಡ್, ಇಟಲಿ, ಇಸ್ರೇಲ್, ಫ್ರಾನ್ಸ್, ರಷ್ಯಾ, ಆಫ್ರಿಕಾ, ಜರುಸಲೇಂ ಮೊದಲಾದ ಜಗತ್ತಿನ ಮಹತ್ವದ ರಾಷ್ಟ್ರಗಳನ್ನು ಸಂದರ್ಶಿಸಿ ಆಯಾ ರಾಷ್ಟ್ರಗಳ ಭೂಗೋಳ, ಇತಿಹಾಸ, ಶಿಕ್ಷಣ, ವ್ಯವಸಾಯ ಮತ್ತು ಸಾಂಸ್ಕೃತಿಕ ಹಿರಿಮೆಗಿರಿಮೆಗಳನ್ನು ಮನಂಬುಗುವಂತೆ ಚಿತ್ರಿಸಿದ್ದಾರೆ. ಯಾವುದೇ ದೇಶದ ಸ್ಥಿತಿಗತಿಗಳನ್ನು ಚಿತ್ರಿಸುವ ಸಂದರ್ಭದಲ್ಲಿ

ಭಾರತದ ಸ್ಥಿತಿಗತಿಗಳೊಂದಿಗೆ ತುಲನೆ ಮಾಡಿ ನೋಡುವ ತೌಲನಿಕ ಪ್ರಜ್ಞೆ ಈ ಲೇಖಕರಿಗೆ ಸಹಜವಾಗಿ ಬಂದಿದೆ.

ದೇಜಗೌ ರವರು 'ವಿಸ್ಮಯಗಳ ನಾಡಿನಲ್ಲಿ' ಕೃತಿಯಲ್ಲಿ ಲೇಖಕರು ತಾವು ಕಂಡುಂಡ ಅನುಭವಗಳನ್ನು ದಾಖಲಿಸಿದ್ದಾರೆ. ಅಲ್ಲಲ್ಲಿ ಅವರಿಗೆ ಭಾರತದ ದುಸ್ಥಿತಿಯು ನೆನಪಾಗುತ್ತದೆ. ಹೀಗೆ ನೆನಪಾದಾಗ ಅವರು ಮರುಕ ಪಡುತ್ತಾರೆ. ಮತ್ತು ಆ ದೇಶದ ಶ್ರೀಮಂತ ಭೋಗವಿಲಾಸ ಜೀವನ, ಜೂಜು ಕೇಂದ್ರಗಳು, ಅಲ್ಲಿನ ಜನರ ಮುಕ್ತ ಲೈಂಗಿಕತೆ ಮತ್ತು ವಿದ್ಯಾರ್ಥಿಗಳು ತಮ್ಮ ಚಿಕ್ಕವಯಸ್ಸಿನಲ್ಲಿಯೇ ಲೈಂಗಿಕ ಕಾಮನೆಗಳಿಗೆ ಬಲಿಯಾಗುವುದನ್ನು ಆ ದೇಶದ ದೌರ್ಬಲ್ಯಗಳನ್ನು ತಿಳಿಸಿಕೊಡುತ್ತಾರೆ.

ಪ್ರಸ್ತುತ 'ವಿಸ್ಮಯಗಳ ನಾಡಿನಲ್ಲಿ' ಅಮೆರಿಕ ದೇಶವನ್ನು ಕುರಿತ ಪ್ರವಾಸ ಕಥನ ಕಾದಂಬರಿಯ ತಂತ್ರದಲ್ಲಿ ಪ್ರಥಮ ಪುರುಷದಲ್ಲಿ ಅಭಿವ್ಯಕ್ತಗೊಂಡಿದೆ. ಕನ್ನಡದಲ್ಲಿನ ಪ್ರವಾಸ ಕಥನಗಳನ್ನು ಅವಲೋಕಿಸಿದಾಗ ಅಮೆರಿಕ ಕುರಿತ ಪ್ರವಾಸ ಕಥನಗಳ ಸಿಂಹಪಾಲು ಪಡೆಯುತ್ತವೆ. ಈ ಕುರಿತು ಸಮೃದ್ಧ ರಚನೆಗಳಿದ್ದರೂ ಸಹ ದೇಜಗೌ ಸಾಧ್ಯವಾದ ಮಟ್ಟಿಗೂ ಪುನರಾವರ್ತನೆಯಾಗದಂತೆ ನೋಡಿಕೊಂಡಿದ್ದಾರೆ. ಒಂದು ವೇಳೆ ಒಂದು ಸನ್ನಿವೇಶದ ಬಗ್ಗೆ ಈಗಾಗಲೇ ವಿಪುಲವಾದ ವಿವರಣೆ ದೊರೆತರೆ ಅಂಥ ಕಡೆ ತಮ್ಮ ಬರವಣಿಗೆಯನ್ನು ಮಿತಗೊಳಿಸುತ್ತಾರೆ. ಉದಾಹರಣೆ ನಯಾಗಾರ ಜಲಪಾತ, ಆದರೆ ಅಲ್ಲಿ ಬಿಂದಿಗೆಯಲ್ಲಿ ಕಡಲು ತುಂಬುವ ಸಾಂದ್ರ ಬಂಧುರ ಕಲೆಯನ್ನು ಅನುಸರಿಸುತ್ತಾರೆ. ಅಮೆರಿಕೆಯ ಬಹಿರ್ ಮತ್ತು ಅಂತರ್ ಜಗತ್ತನ್ನು ಅಳೆದು ತೂಗುವ ಮೌಲ್ಯಾಧಾರಿತ ವಿಮರ್ಶೆ ಈ ಲೇಖಕರಿಗೆ ಸಿದ್ಧಿಸಿದೆ. ಗುಣಗಳನ್ನು ಹೇಳುವಂತೆ ದೋಷಗಳನ್ನೂ ಸೂಚಿಸುವ ಸ್ವಭಾವ ಇವರದು. ಹೀಗಾಗಿ ದೇಜಗೌ ಪ್ರವಾಸ ಕಥನಗಳು ಪ್ರಮುಖವಾಗಿ ವಸ್ತುನಿಷ್ಠ ಮನೋಧರ್ಮದಿಂದ ಕೂಡಿದೆ.

ಒಟ್ಟಿನಲ್ಲಿ ದೇಜಗೌ ಅವರನ್ನು ಕನ್ನಡ ಪ್ರವಾಸ ಸಾಹಿತ್ಯ ಸಾರ್ವಭೌಮ ಎಂದು ಕರೆಯಬಹುದು. ಓದುಗರನ್ನು ಓದಿನುದ್ದಕ್ಕೂ ಸೆಳೆದಿಡುವ ಚಿತ್ತಾಕರ್ಷಕ ಬರವಣಿಗೆ ಅವರದು. ಹೀಗಾಗಿ ಅವರ ಪ್ರವಾಸ ಕಥನಗಳು ಅಂಗೈ ಮೇಲಣ ರಂಜಕ ಚಿತ್ರ ಶಾಲೆಗಳೆಂದು ಹೇಳಬಹುದು.

# ಗ್ರಂಥ ಋಣ


೧. ವಿಸ್ಮಯಗಳ ನಾಡಿನಲ್ಲಿ

ಲೇ. ದೇಜಗೌ

೨. ವಿದೇಶಿ ಪ್ರವಾಸ

ಲೇ. ಆರ್ಯಾಂಬ ಪಟ್ಟಾಭಿ

೩. ಅಮೆರಿಕಾದಲ್ಲಿ ಗೊರೂರು

ಲೇ. ಗೊರೂರು ರಾಮಸ್ವಾಮಿ ಅಯ್ಯಂಗಾರ್

೪. ಅಮೆರಿಕಾದಲ್ಲಿ ಶಾಂತಿ ಮತ್ತು ನಾನು

ಲೇ. ಡಾ. ಪ್ರಭುಶಂಕರ

೫. ಕನ್ನಡ ವಿಶ್ವಕೋಶ ಸಂಪುಟ – ೩

೬. ಪ್ರವಾಸ ಸಾಹಿತ್ಯ ಒಂದು ಅಧ್ಯಯನ

ಸಂ. ಮಲ್ಲೇಪುರ ಜಿ. ವೆಂಕಟೇಶ್

೭. ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ

ಡಾ. ಎಸ್. ವಿದ್ಯಾಶಂಕರ್

